


# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೫]　　ಸಂಪಾದಕರು : ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ.　　[ಸಂಚಿಕೆ ೮

## ಪರಿಷತ್ತಿಗೆ ಡೆಪ್ಯುಟಿ ಸ್ಪೀಕರರ ಭೇಟಿ



ಲೋಕಸಭೆಯ ಡೆಪ್ಯುಟಿ ಸ್ಪೀಕರರಾದ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು ಕನ್ನಡ ಸಾಹಿತ್ಯ ಪರಿಷತ್ತಿಗೆ ಜುಲೈ ದಿನಾಂಕ ೧೮ ರಂದು ಭೇಟಿ ಕೊಟ್ಟಾಗ ತೆಗೆದ ಚಿತ್ರ. ಚಿತ್ರದಲ್ಲಿ ಶ್ರೀ ಕೃಷ್ಣಮೂರ್ತಿರಾಯರು, (ಮಧ್ಯದಲ್ಲಿರುವವರು) ಪರಿಷತ್ ಅಧ್ಯಕ್ಷರು, ಗೌರವ ಕೋಶಾಧಿಕಾರಿಗಳು ಮತ್ತು ಗೌರವ ಕಾರ್ಯದರ್ಶಿಗಳು ಇವರನ್ನು ಕಾಣಬಹುದು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಸಂಪುಟ ೨೫ ] ಆಗಸ್ಟ್ ೧೯೬೨ [ ಸಂಚಿಕೆ ೮

## ವಿಷಯ ಸೂಚಿಕೆ







ಸಂಪುಟ ೨೫ ] ಆಗಸ್ಟ್ ೧೯೬೨ [ ಸಂಚಿಕೆ ೮

# 'ಮಾಸ್ತಿ ನೀವು ಕನ್ನಡದ ಆಸ್ತಿ'*

ಶ್ರೀ ಶ್ರೀನಿವಾಸ ಉಡುಪ

ತಮ್ಮ ಹೆಸರು ಮಾಸ್ತಿ
ನೀವು ಕನ್ನಡದ ಆಸ್ತಿ.

ಎಲ್ಲ ಬರಹ ದೊಳಿರುವುದು
ಮನರಂಜನೆಯ ಸತ್ಯವು
ಎಲ್ಲ ಹೂವಿಗೂ ಒಂದೇ ರೂಪವೆ?
ಅಲ್ಲ ಅವನು ಪರಿಕ್ಷೀಸಿ ನೋಡೆ!
ಎಲ್ಲ ಬೇರು, ಗಾಳಿ ಜಲಗಳ
ಮೂಲ ಹೀರಿ ತಾ ವೃದ್ಧಿಪುದು
ಅಂತೆಯೇ ತಾವು ಸಣ್ಣ ಕತೆಗಳಲಿ
ನೀತಿ ಸತ್ಯದ ಎರಕ ಹೊಯ್ದು ಬೆಳೆಸಿದಿರಿ;

ತಮ್ಮ ಹೆಸರು ಮಾಸ್ತಿ
ನೀವು ಕನ್ನಡದ ಆಸ್ತಿ.

ಮೂಲಜೀವಕೆ ಭಾವ ಜೀವವು
ಅದು ಬೆಳೆದಿದ್ದೆ ನವ ಜೀವನ,
ಅದರೊಳ್ ನಿಮ್ಮ ಬುದ್ಧಿ ಬೆರೆತು
ಹೊರಬರುವುದು ಮಾಸಕೊಮ್ಮೆ 'ಜೀವನ'
ಹುಟ್ಟಿ ಬರುವ ನವಕೃತಿಗೆ
'ಜೀವನ' ಒಂದು ಮಾರ್ಗದರ್ಶನ
ಕಿರಿಯ ಲೇಖಕರಿಗೆ ನಿಮ್ಮಾಶ್ರಯವೇ
ನವೋತ್ಸಾಹದ ಮಹಾದರ್ಶನ

ತಮ್ಮ ಹೆಸರು ಮಾಸ್ತಿ
ನೀವು ಕನ್ನಡದ ಆಸ್ತಿ.

ಕಾದಂಬರಿಕಾರರಾಗಿ ವಿಮರ್ಶಕರಾಗಿ
ಕನ್ನಡ ವಿಶ್ವದೊಳ್ ಸದಾ ಮೆರೆದಿರಿ;
ಸಣ್ಣ ಕಥಾಕೃತರಾಗಿ ವಾಗ್ಮಿಗಳಾಗಿ
ಕನ್ನಡ ಜನತೆಗೆ ಸದಾ ನೀವಿರಿ
ಸಾಹಿತ್ಯ ಭಾಷಣ ಈ ಮುಖಗಳು
ನಿಮ್ಮೊಳು ಪರಿಪೂರ್ಣ ಪಡೆದಿವು
ಅದಕಾಗಿ ತಮ್ಮನು ಕನ್ನಡ ಜನಗಳು
ಸದಾ ಕಾಣ್ವರು ಭಕ್ತಿಯೊಳ್

ತಮ್ಮ ಹೆಸರು ಮಾಸ್ತಿ
ನೀವು ಕನ್ನಡದ ಆಸ್ತಿ.

ಸಾಹಿತ್ಯಕೆ ಶೈಲಿಯೊಂದೇ ಸಾಲದು
ಶೈಲಿಗೊಪ್ಪುವ ಹಿರಿಯ ನೀತಿ
ನೀತಿಯೊಳ್ ಬೆರೆತ ನವರಸಗಳು
ಅದನ್ನು ಹೊಂದಿವೆ ನಿಮ್ಮ ಕೃತಿಗಳು
ಕನ್ನಡಕೆ ಆಚಾರ್ಯರು ನೀವು
ಕನ್ನಡದ ಸುಪುತ್ರರು ತಾವು
ನಮ್ಮ ಜಿಲ್ಲೆಯ ಬರಹಗಾರರಿಂದು
ನಿಮ್ಮ ಪೂರ್ಣ ಪರಿಚಯ ಹೊಂದಲೆಂದು

ತಮ್ಮ ಹೆಸರು ಮಾಸ್ತಿ
ನೀವು ಕನ್ನಡದ ಆಸ್ತಿ.

---

* ೨೨–೪–೧೯೬೨ ರಂದು ಶಿವಮೊಗ್ಗ ಜಿಲ್ಲಾ ಬರಹಗಾರರು 'ಮಾಸ್ತಿ'ಯವರಿಗೆ ಸನ್ಮಾನಿಸಿದ ಕಾರ್ಯಕ್ರಮದಲ್ಲಿ ಅವರಿಗೆ ಅರ್ಪಿಸಿದ ಕವನ.




# ಉಡುತಡಿಯ ಮಹಾದೇವಿಯಕ್ಕನ ರಗಳೆ - ವಿಮರ್ಶೆ

**ಲೇಖಾಂಕ (೨)**

ಶ್ರೀ ಶಾಂತಯ್ಯ ಕೆಂಪಯ್ಯಮಠ

[ಜುಲೈ ಸಂಚಿಕೆಯಿಂದ ಮುಂದುವರಿದುದು]

ಉಡುತಡಿಯೆಂಬ ಗ್ರಾಮ. ಶಿವಭಕ್ತರ ಬೀಡು, ಪುಣ್ಯದ ತವರು, ಶಾಂತಿಯ ಸೆಲೆ. ಚೆಲುವರು ಜ್ಞಾನಿಗಳು ಅಭಿಮಾನಿಗಳು ಮತ್ತು ನಿರ್ಬಾಧಕರಾದ ಶಿವಭಕ್ತ ಶಿವಭಕ್ತೆಯರು "ನೆರೆನೆರೆವರಧಿಕ ಜೌವ್ವನದೊಳಂ ಜನದೊಳಂ." ಮಹಾದೇವಿಯಕ್ಕನ ಜನನಕ್ಕೆ ದಿವ್ಯ ಪರಿಸರ ಪರಿವೇಷ ಸಿದ್ಧವಾಗಿದೆ. ಶೈವ ದಂಪತಿಗಳ ಏಕಾಗ್ರಚಿತ್ತದ ಪರಿಶುದ್ಧವಾದ ಹಂಬಲ ದಿವ್ಯ ಪುತ್ರಿಯನ್ನು ಪಡೆಯುವುದು.

> ದೇವಿ ಎಮಗೊರ್ವ ಪುತ್ರಿಯನೀವುದೆಲೆ ತಾಯೆ
> ನಾವು ನಿಮ್ಮಯ ಪೆಸರನಿಟ್ಟಪೆವು ಒಲಿದೀಯೆ
> ಅವನಿಗತಿ ರೂಪಸಂಪನ್ನೆಯುಂ ಚೆನ್ನೆಯುಂ
> ಶಿವನ ಸದ್ಭಕ್ತಿಯೊಳ ಭಿನ್ನೆಯಂ ಚೆನ್ನೆಯುಂ ॥

ಸಂತಾನ ಯಾಚನೆಯಲ್ಲಡಗಿದೆ ಪಾವಿತ್ರ್ಯ ಮತ್ತು ನೈರ್ಮಲ್ಯ ಪ್ರಕಟವಾಗಿದೆ. "ನಂಬಿಕರೆದೊಡೆ ಓ ಎನ್ನನೆ ಶಿವನು." ಭಕ್ತರ ಪವಿತ್ರತಮ ಕೂಗು ಶಿವೆಯ ಮನ ಮುಟ್ಟಿತು, ಕರುಣಾ ಪ್ರಸಾದವಾಯಿತು. ಮಾಯಾತೀತರಾದ ಶಿವಭಕ್ತರ ಮನೆಯಲ್ಲಿ ಮಹಾದೇವಿ ಜನಿಸಿದಳು. ಲೋಕಕಲ್ಯಾಣಕ್ಕೆ ನಾಂದಿಯಾಯಿತು. ಮಾಯಾತಮಂಧವನ್ನು ಹರಿದೋಡಿಸಲು ದಿವ್ಯ ಪ್ರಭೆ ಮೂಡಿತು.

ಶಿವಭಕ್ತೆಯ "ಗರ್ಭಮಂ ಬಣ್ಣಿಪರಾರ್!" ಭಕ್ತಿಪ್ರಿಯನಾದ ಹರಿಹರ ಗರ್ಭವಿವರಣೆಯಿಂದ ಶೃಂಗಾರ ರಸ ಬುಗ್ಗೆಯನ್ನು ಸೃಷ್ಟಿಸಿ ತನ್ನ ಬಹುಮುಖವಾದ ಕಾವ್ಯಕಲಾ ಪ್ರೌಢಿಮೆಯನ್ನು ಲೋಕಾಂತ ಪಡಿಸಿರುವನು.

> ಕೊಳನ ಸರೋಜದೊಳ್ ಬಳೆವ ಬಾಲ ಮರಾಳ
> ವಿಶಾಲ ಪಿಂಡಮೋ
> ಎಳೆ ನೆರೆಯೊಳ್ ವಿರಾಜಿಸುವ ಶಾಂತಿಯ ಕಾಂತಿಯ
> ಪಂಜು ಪರ್ವಿತೋ
> ಜಳನವ ಚಂದ್ರಿಕಾ ಕಳಸಮೋ ಪರಮೇಶ್ವರ ಭಕ್ತಿ ಸಿಂಗರ
> ಕ್ಕೆಳಸಿ ವಧೂದರಾಂತರ ದೊಳಿರ್ದುದೊ ಪೇಳೆನೆ
> ಗರ್ಭ ಮೊಪ್ಪುಗುಂ ॥

"ಬಾಲ ಮರಾಳ ವಿಶಾಲ ಪಿಂಡಮೋ", "ಚಂದ್ರನ ಕಾಂತಿ ಪರ್ವಿತೋ", "ಚಂದ್ರಿಕಾಕಳಶಮೋ" ಎಂಬಲ್ಲಿ ಸಂದೇಹಾಲಂಕಾರ ನಿರ್ದಿಷ್ಟವಾಗಿ ವ್ಯಕ್ತವಾಗಿದೆ. "ಪರಮೇಶ್ವರ ಭಕ್ತಿ" ಎನ್ನುವಲ್ಲಿ ಸಂದೇಹ ಬಯಲಾಗಿದೆ. ಅಲಂಕಾರ ವೈಚಿತ್ರ್ಯ ಕಾವ್ಯಲೋಕದಲ್ಲುಂಟಾಗಿದೆ. ಕ್ರಾಂತಿ ಮನೋವೃತ್ತಿಯ ಧೀರಕವಿಗೆ ತಕ್ಕ ರೀತಿ ಸ್ಪಷ್ಟವಾಗಿದೆ. ನಿಸ್ಸಂದೇಹವಾಗಿ ಶಿವಭಕ್ತೆಯ ಉದರಾಂತರಾಳದಲ್ಲಿ ಶೃಂಗಾರ ಪೋಷಣೆಗೆ ಬಂದು ನೆಲೆಸಿದೆ–"ಪರಮೇಶ್ವರ ಭಕ್ತಿ". ಮಕ್ಕಳ ಮುಂದಿನ ವ್ಯಕ್ತಿತ್ವದ ಬೆಳೆಗೆ ತಕ್ಕ ಬೀಜ ತಾಯ ಗರ್ಭದಲ್ಲಿ ಬೇರು ಬಿಡುವುದೆನ್ನುವ ಮಾತು ಮಾನಸಶಾಸ್ತ್ರ ಸಮ್ಮತ; ಈ ತತ್ವವನ್ನು ಅಲಂಕಾರ ಚೌಕಟ್ಟಿನಲ್ಲಿ ಸೆರೆಹಿಡಿದು ಮಾರ್ಮಿಕವಾಗಿ ಮನಂಬುಗುವಂತೆ ವರ್ಣಿಸಿದ ಕವಿಯ ಮಾನಸಶಾಸ್ತ್ರ ಪ್ರಜ್ಞೆಗೆ ಕಳೆಯೇರಿದೆ. ತ್ರಿವಳಿನಾಭಿ ಕುಚಾಗ್ರಗಳ ವರ್ಣನೆ ಮಹಾದೇವಿಯಕ್ಕನ ದಿವ್ಯ ವ್ಯಕ್ತಿತ್ವಕ್ಕೆ ಪೀಠಿಕೆ. ಅವಳ ಮುಂದಿನ ವಿಚಾರ ನಡೆನುಡಿಗೆ ಮುನ್‌ಸೂಚನೆ. "ತೆಳುವ ಸುರೊಳಗೆ ಬಳೆವ ಕನ್ಯೆಯ ರೂಪ ವಿಳಾಸಕ್ಕೆ ಮೂರುಲೋಕದೊಳು ಸರಿಯಿಲ್ಲೆಂದು ಮನ್ನೆಯನಪ್ಪ ಕೌಶಿಕರಾಜಂಗೆ ವಳಿತ್ರಯಂಗಳು ಪೇಳಲ್ ಪೋದುವೆಂಬುದು ಪಮಾನವಲ್ಲಲ್ಲ: ಈ **ಶೀತಳಜ್ಯೋತಿಯನೊಳಗೆ** ತಳೆದ ಬಳಿಕ್ಕೆ ವಳಿತ್ರಯಂ ಬಳಲ್ಚಿ ಪೋಗೆ ತಿಳ್ಪೊಡೆ ಯೊಪ್ಪುತ್ತು ಮಿರ್ದುದು...."

"ತನುವೆಂಬುದ್ಯಾನ ವನಮಧ್ಯದ ಲಾವಣ್ಯ ಜಲದಿಂದ ತುಂಬಿದ ತಿಳಿಗೊಳದ ವಿಕಸಿತ ಕಮಲವಲ್ಲ **ಪುಣ್ಯೋದರನೊಂದು ಕಣ್ಣಂ ಪಡೆದಂತಿದೆ."**

"ಕನಕ ಕಳಸಂಗಳಿಗೆ ನೀಲದ ಮುಚ್ಚಳ ವಿಕ್ಕಿದಂತಿರ್ದಪುವೆಂಬುಪಮಾನಮಂ ಮೀರಿ: ಈ ಭಕ್ತೆಯ ಬಸುರೊಳ್ ಬಂದು ತಮ್ಮೊಳು ತೀವಿದ ಶಿವಪ್ರಸಾದ ಪಯಃ ಪಾನದಿಂ ಬೆಳೆದು ಭವಿಗೆ ಹೆಂಡತಿಯಾದಪಳೆಂಬುಮ್ಮಳದಿಂ ಮುಖಕಂದಿದುವೆಂಬಂತೆ ಕುಚಾಗ್ರಂ ಕಪ್ಪು ತಾಳಿರ್ದುವು...."

ತ್ರಿವಳಿಗಳು ಕೌಶಿಕ ರಾಜನಿಗೆ ಸೌಂದರ್ಯದ ಸಂದೇಶ ಬೀರಲು ಹೋದವೆಂಬಲ್ಲಿ ಸ್ಥೂಲವಾದ ವರ್ಣನೆ ಬಂದಿದೆ. ಸೂಕ್ಷ್ಮವಾದ ಮತ್ತು ಮಹಾದೇವಿಯಕ್ಕನ ವ್ಯಕ್ತಿತ್ವಕ್ಕೆ ಪ್ರೋಜ್ವಲತೆಯನ್ನುಂಟುಮಾಡುವ ವಿವರಣೆ — "ಶೀತಳ ಜ್ಯೋತಿಯ" ಪ್ರಭಾವದಿಂದ ಹೊರಗಿರುವ ಪ್ರಖರವಾದ

ತಾಪತ್ರಯಂಗಳು ನಂದಿ ನಶಿಸಿಹೋದವೆಂಬಂತೆ 'ವಳಿ ತ್ರಯ'ಂಗಳು ಕಣ್ಮರೆಯಾಗಿವೆ. ಮೊದಲು ಬಂದ ಉಪಮೆ ಕವಿಯ ರಸಜ್ಞಹೃದಯದಿಂದ ಚಿಮ್ಮಿಬಂದ ಸಹಜ ವಿಚಾರಕ್ಕೆ ದ್ಯೋತಕವಾಗಿದೆ. ನಂತರ ಬಂದ ಉಪಮೆ ಕವಿಯ ಔಚಿತ್ಯ ಪೂರ್ಣ ಪ್ರಜ್ಞೆಗೆ ನಿದರ್ಶನವಾಗಿದೆ. ಕವಿಯ ಕಲ್ಪನಾ ಭಾಂಡಾರದಲ್ಲಿ "ಶೀತಲ ಜ್ಯೋತಿ"ಯೂ ಇದೆ. ರವಿ ಕಾಣದ್ದು ಕವಿ ಕಾಣುತ್ತಾನೆಂಬ ಮಾತು ಸತಸ್ಯ ಸತ್ಯ ವಾಗಿದೆ. "ಪುಣ್ಯೋದರವೇ ಕಣ್ಣು ಪಡೆದಂತೆ"–ಸಹೃದಯರ ಕಣ್ಣುಗಳಲ್ಲಿ ಜ್ಯೋತಿ ಆವಿರ್ಭವಿಸಿದಂತೆ ಪರಿಣಾಮದಾಯಕ.

"ಚಂದ್ರನಿಂ ಬೆಳುದಿಂಗಳು, ಪರುಷದಿಂ ಬಣ್ಣ, ಚಿಂತಾಮಣಿಯಿಂ ಕಾಂತಿ, ಸುರಭಿಯಿಂ ಸುಧಾರಸಂ, ಕಲ್ಪತರುವಿಂ ಸಣ್ಣನನೆ ಪುಟ್ಟುವಂತೆ" ಮಹಾದೇವಿಯಕ್ಕ ಲೋಕದ ಬೆಳಕನ್ನು ಕಂಡಳು. ಮೃಡ ಭಕ್ತರು ಆನಂದದಿಂದ ಗುಡಿ ಕಟ್ಟಿದರು. ಬಂಧುಬಾಂಧವರು ಹಿಗ್ಗಿನಿಂದ ಹೊರೆ ಯೇರಿದರು. ಉಪಮಾ ಪಂಕ್ತಿ ಅಕ್ಕಳ ವ್ಯಕ್ತಿತ್ವ ಗೀತೆ. ಕವಿಯ ಅಂತರಾತ್ಮದ ಸಾತ್ವಿಕ ಮನೋವೃತ್ತಿಗೆ ಸಾಕ್ಷಿ. 'ಮಹಾದೇವಿ' ಎಂದು ಹೆಸರಿಟ್ಟು ಜಾತಕರ್ಮಂಗಳನ್ನು ನೆರವೇರಿಸಿ ಸಂಭ್ರಮದಿಂದ ನಲಿದಾಡಿದರು. ಜೀವನದ ಸುವರ್ಣಾವಸ್ಥೆ ಬಾಲ್ಯ. ಮುಗ್ಧ, ಸಹಜ, ನಿರಾಳ ಜೀವನ ದರ್ಶನೀಯ. ಸಾಮಾನ್ಯ ಶಿಶುವಿನಂತೆ ಮಹಾದೇವಿ ಬಾಲ್ಯ ವನ್ನು ಕಳೆದರೂ ಕವಿಯ ಕಲ್ಪನಾ ವಿಲಾಸ ರಮ್ಯ ಪರಿಸರ ವನ್ನೊದಗಿಸಿದೆ. ಓದುಗರ ಮನಸ್ಸನ್ನು ಸೂರೆಗೊಳ್ಳು ವಂತಿದೆ. ಬೆಳೆಯ ಬಲ ಸಸಿಯಲ್ಲಿ ಗೋಚರಿಸುವಂತೆ ಅವಳ ದಿವ್ಯ ಜೀವನಕ್ಕೆ ಪ್ರತೀಕವಾಗಿ ನಿಂತಿದೆ. "ಉತ್ಪಳದೊಳು ಸಿಲ್ಕಿದ ಪೆಣ್ದುಂಬಿ ಜಿನುಗುವಂತೆ ಅಳುತ್ತ, ನಕ್ಕರೆ ಕಮಲ ಕುಟ್ಮಲ ವರಳಿದಂತೆ, ಕುಮುದ ಮುದುಡುವಂತೆ ಕಣ್ಮುಚ್ಚು ವಳು, ಶಿವಭಕ್ತಿಯ ಮುಚ್ಚುಳನ್ನು ತೆಗೆವಂತೆ ಕಣ್ದೆರೆಯು ವಳು....ಸುಖಂ ಸುಳಿವಂತೆ ನಡೆಗಲಿವುತ್ತ, ವೀಣೆದನಿ ಗೊಡುವಂತೆ ನುಡಿಗಲಿವುತ್ತ .... ಸೂಸಕದ ಸುಮ್ಮಾನಿ, ಭಸಿತದ ಭಾವತಿ .... ನಳನಳಿಸಿ ಬೆಳೆಯುವಳು." ಕವಿಗೆ ಭಾವೋದ್ರೇಕ, ವಾಚಕರಿಗೆ ಭಾವೋನ್ಮಾದ. ಸಹಜತೆ ವರ್ಣನೆಯ ಮುಖವಾಡದಿಂದ ಸುರಮ್ಯವಾಗಿದೆ.

ಹತ್ತು ವರ್ಷದ ಸರಳೆಗೆ ಶೈವಾಚಾರ್ಯರಿಂದ ಗುರುಕಾರುಣ್ಯ ಪ್ರಸಾದ ವುಂಟಾಗುವುದು. "ಬಾಲ್ಯಂ ಸಡಿಲ್ದು ಯೌವ್ವನಂ ಮೆಲ್ಲ ಮೆಲ್ಲನಾಲಿಂಗಿಸುವಲ್ಲಿ" ಕಾವ್ಯಶಕ್ತಿಗೂ ಯೌವ್ವನೋ ದಯವಾಗಿದೆ. "ಇದಾವ ಕಾಮುಕರಂ ಕೀಳ್ ಮಾಡಲಿರ್ದ ಪುದಿದಾವ ರಸಿಕರ ಭಾವಮಂ ಬರಿಕೆಯ್ಯಲಿರ್ದಪುದಿದಾವ ಸಜ್ಜನರಂ ನೀತಿಗೆಡಿಸಲಿರ್ದಪುದಿದಾವ ವೀರರಂ ವಿರಥರಂ ಮಾಡಲಿರ್ದಪುದಿದಾವರಸುಮಕ್ಕಳನಾಳ್ ಮಾಡಲಿರ್ದ ಪುದಿದಾವ ದೇವರ ಚಿತ್ತಮಂ ಸೂರೆಗೊಳಲಿರ್ದಪುದು. . ." ವಿವರಣೆ ಲಾಲಿತ್ಯ ಪೂರ್ಣ. ಮೃದು ಮಧುರ ಪದಬಂಧದಿಂದ ರಸೋತ್ಕರ್ಷಕ ಮತ್ತು ಭಾವ ಪ್ರಚೋದಕ. ಮಹಾದೇವಿಯ ಭವ್ಯ ಜೀವನದ ರಹಸ್ಯ ಅವಳ ದಿವ್ಯ ಸೌಂದರ್ಯದಲ್ಲಡಿಗಿದೆಂದ ರಿತ ಕವಿಬ್ರಹ್ಮ ಅವಳ ಸೌಂದರ್ಯವನ್ನು ಪುನಃ ಸೃಷ್ಟಿಸಿರುವನು. ಚತುರ್ಮುಖಗಳು ಮಾತ್ರ ಬ್ರಹ್ಮನಿಗೆ. ಚತುರ್ದಶ ಮುಖ ಗಳು ರಸಋಷಿಯಾದ ಕವಿವರೇಣ್ಯನಿಗೆ—ಕೌಶಿಕರಾಜನನ್ನು ಸೇವಕನಂತೆ ಪರಿಗ್ರಹಿಸಿದ ಸೌಂದರ್ಯ, ಚನ್ನಮಲ್ಲಿಕಾರ್ಜುನ ನನ್ನು ಅರಸಾಗಿ ಅಂಗೀಕರಿಸುತ್ತದೆ. ಸೌಂದರ್ಯದ ಅನಂತ ಮುಖ ಕವಿಯ ಕಲ್ಪನಾ ಕುಂಚದಿಂದ ಚಿತ್ರಿತವಾಗಿದೆ. ಷೋಡಶಪ್ರಾಯ ಸಮನಿಸಲು ಮಹಾದೇವಿಯಕ್ಕಳ ಲಾವಣ್ಯ ರಸಭರಿತ ಸುಕುಮಾರಾವಯವಂಗಳಿಗೆ ಸೌಂದರ್ಯ ಮಹಾ ಪೂರವುಂಟಾಗುತ್ತದೆ. ಸೌಂದರ್ಯ ರಸದೋಕುಳಿ ದೃಗ್ಗೋ ಚರವಾಗುತ್ತದೆ. ವರ್ಣನೆ ಚರ್ವಿತಚರ್ವಣವಾದರೂ ನಿತ್ಯ ನೂತನತೆ ಮನಹಿಡಿಯುತ್ತದೆ. "ರತಿಯುಂ ಅನಂಗನುಂ ದಿಗ್ವಿಜಯಂ ಮಾಳ್ಪಲ್ಲಿ ಪವಣಿಸಿ ವಸಂತಂ ಮಾಡಿದ ಹೊಸ ಸುವರ್ಣ ಗೂಡಾರಂಗಳೆಂಬಂತೆ ಪೇರುರವಂ ಬಳಸಿ ಪರ್ವಿ ದುತ್ತುಂಗ ಪೀನ ಪಯೋಧರಂಗಳೆ...." ಕಾವ್ಯ ಶಕ್ತಿಯ ಕಾತ ರತೆ, ತವಕ ಮತ್ತು ಉನ್ಮಾದ ಮನೋಜ್ಞವಾಗಿ ಅಭಿವ್ಯಕ್ತ ವಾಗಿದೆ. ಸೌಂದರ್ಯ ರಾಜಧಾನಿಯಲ್ಲಿ ಸಾಮ್ರಾಟ ಮದನನ ಪಟ್ಟಾಭಿಷೇಕ. ಸಂಭ್ರಮದ ವಿಜೃಂಭಣೆ. "ತುಳುಂಕದ ಪೂರ್ಣ ಸುಖದಂತೆ, ಮಾಸಲಳಿಯದ ಮನೋರಥದಂತೆ, ಬಾಸಣಿಸಿದ ಮೃತದಂತೆ, ಮುದ್ರಿಸಿದ ಪುಣ್ಯದಂತೆ, ಮೂಡಿದ ಭಕ್ತಿಯಂತೆ, ಕೂಡಿದ ಪೂಜೆಯಂತೆ, ಕಾಮನ ಬಾಣದಂತೆ, ಸೋಮನ ಕಿರಣದಂತೆ, ವಸಂತನ ವಶೀಕರಣ ದಂತೆ, ನವಲಕುಮಿಯ ಭಾಗ್ಯದಂತೆ, ಮಳಯಾನಿಳನ ಮದದಂತೆ...." ಮಹಾದೇವಿಯಕ್ಕಳ ಅಮೂಲ್ಯ ಯೌವ್ವ ನದ ನೈರ್ಮಲ್ಯ ಶಬ್ದಸ್ತೋಮಂಗಳಲ್ಲಿ ತಾನೇ ತಾನಾಗಿ ಕಂಗೊಳಿಸುತ್ತಿದೆ. ಪುಣ್ಯವನ್ನೇ ಮುದ್ರಿಸಿದಂತೆ, ಅಮೃತ ವನ್ನೇ ಮುಚ್ಚಿಟ್ಟಂತೆ, ಭಕ್ತಿಯೇ ಉದ್ಭವಿಸಿದಂತೆ, ಪೂಜೆಯೇ ಸಾಕಾರವೆತ್ತಂತೆ, ಮಹಾದೇವಿಯಕ್ಕಳ ಸೌಂದರ್ಯಭರಿತ ಯೌವ್ವನ ಸತ್ಯಂ ಶಿವಂ ಸುಂದರಂಗಳ ತ್ರಿವೇಣಿಸಂಗಮವಾಗಿದೆ. ಹರಿಹರ ಮಹಾಕವಿಯು ತನ್ನ ಕವಿತಾ ಚಾತುರ್ಯವನ್ನು ಕುರಿತು ಹಾಡಿದ ಪದ್ಯ ಸ್ಮರಣೆಗೆ ಸ್ಫುರಿಸುತ್ತದೆ.

ಪ್ರಿಯ ವಚದಂತೆ ಪುಣ್ಯತತಿಯಂತೆ, ಸುಧಾಕರನಂತೆ,
ಕೂರ್ತ ಮು।
ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ
ಪುಷ್ಪ ಮಾ।
ಲೆಯ ಪೊಸ ಕಂಪಿನಂತೆ ಮಲಯಾನಿಲನಂತೆ
ಮರಾಳನಂತೆ ಹಂ।
ಪೆಯ ಹರಿದೇವ ಸುನ್ನತ ಕೃತಿ ಪ್ರಸರಂ ಭುವನೈಕ
ಪೂಜಿತಂ ॥

ಕವಿಯ ಪ್ರಿಯವಚನ ಕರ್ಣಕಮನೀಯವಾಗಿದೆ, ಚಿತ್ರಣ ನಯನಮನೋಹರವಾಗಿದೆ. ರಸ ಆಸ್ವಾದನೀಯವಾಗಿದೆ.

* * *

ಸ್ತಬ್ಧವಾಗಿರುವ ನಗರ ಚೇತರಿಸಿಕೊಳ್ಳುತ್ತದೆ. ನಿಸ್ಸಾಳ ನಾದ ಕಹಳೆಗಳ ನಿನಾದ ಉಣ್ಮೆಪೊಣ್ಮುತ್ತವೆ. ಪದಾತಿ ಸಂಕುಳದ ಉತ್ಸಾಹ ರಭಸತೆ ಗಜಬಜಿಸುತ್ತದೆ. ಕೌಶಿಕ ಮಹಾರಾಜನು ವೈಹಾಳಿಯಿಂದ ರಾಜಧಾನಿಗೆ ಹಿಂತಿರುಗು ತ್ತಿರುವನು. ಕವಿ ಗಮಕಿ ವಾದಿ ವಾಗ್ಮಿಗಳ ಸಡಗರ ಸಂಭ್ರಮದ ಧ್ವನಿ ಮನೆಮನೆಗೂ ಡಂಗುರ ಹೊಯ್ಯು ತ್ತದೆ. ಅರಸನ ಸಕಲೈಶ್ವರ್ಯ ಸಂಪತ್ತು ರೂಪಾಂತು ಪುರ ಪ್ರವೇಶಿಸುತ್ತದೆ. ಸಾಹಸಾಭರಣನು ಗಣಾಧಿಕನಾದ ಕೌಶಿಕ ಮಹಾರಾಜನು ಗಜಮಸ್ತಕದ ಮೇಲೆ ಶ್ವೇತಛತ್ರ ಛಾಯೆಯಲ್ಲಿ ವಿಭವಾನ್ವಿತನಾಗಿ ಶೋಭಿಸುತ್ತಿರುವನು.

ಪುರದ ಕೇರಿಗಳ ಕರುಮಾಡವಂ ನೋಡುತಂ
ನೆರೆದ ಪರಿಜನಕೆ ಸಂತೋಷಮಂ ನೀಡುತಂ

ಅರಸನ ಆಗಮನ ಪುರಜನರ ಸಂತೋಷ ಹೊಳೆಗೆ ಮಹಾ ಪೂರ. ಪುರಜನರಿಂದ ಸಂಭ್ರಮದ ಸ್ವಾಗತ – ಅರಸನಿಗೆ ಆನಂದ. ಹಿಗ್ಗಿನ ಕೊಳುಕೊಡೆ. ಸಂಭ್ರಮದ ವಿನಿಮಯ ಸೌಂದರ್ಯನಿಧಿ, ಭಕ್ತಿ ತರಂಗಿಣಿ, ಸದ್ಗುಣ ಖನಿಯಾದ ಮಹಾದೇವಿ ಸಾಮಾನ್ಯ ಜನರಂತೆ ಅರಸನ ವೈಹಾಳಿಯ ವಿಜೃಂಭಣೆಯನ್ನು ವೀಕ್ಷಿಸುತ್ತಿರುವಳು.

ನೋಡಿದಂ ಕೌಶಿಕ ನೃಪಂ ನಿಂದು ನಾರಿಯಂ
ತೀಡಿದಂ ಪುಷ್ಪಚಾಪಂ ಬಿಲ್ಲನಾರಿಯಂ
ನೋಡಿ ಮಿಗೆನೋಡಿ ನಡೆನೋಡಿ ನೆರೆ ನೋಡುತಿರೆ
ನೋಡಿದೊಡೆ ನಡೆಗೆಡೆ ವಿಚಿತ್ರವಾಗುತ್ತಮಿರೆ
.................................
ಒಂದಡಿಯನಿಡದಾನೆ ಯಂಕುಸಂ ಕೈಮರೆಯೆ
ನಿಂದೆಡೆ ಯೊಳಿರ್ದುದಾ ಕೌಶಿಕಂ ಮೈಮರೆಯೆ.

ಕೌಶಿಕನ ದುಷ್ಟನೋಟ ಮಹಾದೇವಿಯ ರೂಪಲಾವಣ್ಯ ವನ್ನು ಸ್ಪರ್ಶಿಸಿದೊಡನೆ ಕರ್ವುವಿಲ್ಲಿನ ಠೇಂಕಾರ ನಿನದಿಸು ತ್ತದೆ. ಅತಿ ಕಾಮಿಯಾದ ಕೌಶಿಕನ ಪಂಚೇಂದ್ರಿಯಗಳು ಅದಮ್ಯ ಕಾಯ್ಪಿಗೆ ತುತ್ತಾಗುತ್ತವೆ. ಧಮನಿ ಧಮನಿಯಲ್ಲಿ ಆಲಿಂಗನದ ಹಂಬಲ ಸವೇಗವಾಗಿ ಪ್ರವಹಿಸುತ್ತದೆ. ಮನದಲ್ಲಿ ಮುದ್ದಿಸುವ ತವಕ ಕೇಕೆ ಹಾಕಿ ನರ್ತಿಸುತ್ತದೆ. ಬುದ್ಧಿಯಲ್ಲಿ ಲಗ್ನವಾಗಬೇಕೆಂಬ ಕಾತರತೆ ಹುಚ್ಚುಹಿಡಿದು ಕುಣಿಯುತ್ತದೆ. ಸಕಲ ಸೇನಾಸಮೂಹ ಚಿತ್ರದ ಬೊಂಬೆ ಯಂತೆ ತಟಸ್ಥವಾಗುತ್ತದೆ. ಜನಸಂದಣಿ ಸ್ತಂಭೀಭೂತ ವಾಗುತ್ತದೆ.

ತನ್ನ ಮೇಲಣ ನೋಟವೆಂದರಿದು ಮಹಾದೇವಿ
ಉನ್ನತ ಜ್ಞಾನಿಯಭಿಮಾನಿ ಸತಿಯರ ದೇವಿ
ಅರಸ ಕೌಶಿಕನ ಮನಮಂ ಕೊಂಡು ಪೋಪಂತೆ
ಚರಿತದಿಂ ನಿಳಯದೊಳಗಂ ಹೊಕ್ಕಳಾಕಾಂತೆ ॥

ಜ್ಞಾನನಿಧಿಯಾದ ಮಹಾದೇವಿಯಕ್ಕ ತನ್ನಮೇಲಿನ ವಿಕಾರ ನೋಟವೆ ದರಿತು ತ್ವರಿತಗತಿಯಿಂದ ಮನೆಯಲ್ಲೋಡಿದಳು —ಕೌಶಿಕನ ಕಾಮನೆ ಬೆನ್ನಟ್ಟಿತು. ಮೆರವಣಿಗೆ ಸ್ಥಗಿತ ವಾಯಿತು. ತತ್ತರಿಸುವ ಕಾಮುಕ ಕೌಶಿಕ "ಕಾಮನಂಬಿಂಗೆ ಮೂಡಿಗೆಯಾಗುತ್ತಾನೆ." ಅರಸುತನಕ್ಕೆ ಮರುಳುತನ ಹಿಡಿ ಯುತ್ತದೆ. ಕೌಶಿಕನ ಜೀವನ ವಿರಹಜೀವನವಾಗುತ್ತದೆ. ಶಿವಭಕ್ತೆ ತುತ್ತಾಗುವ ವಿಪನ್ನಾವಸ್ಥೆಗೆ, ಪಕ್ಕಾಗುವ ವಿರಹ ಬಾಧೆಗೆ ಅನುಭವಿಸಬೇಕಾಗುವ ಕಳವಳ, ಹಂಬಲ, ಕಾತರತೆ, ವ್ಯಥೆ, ವಿಕಾರ ಎಲ್ಲವೂ ಕೌಶಿಕನ ವಿರಹ ವೇದನೆಯ ಮೂಲಕ ವ್ಯಕ್ತವಾಗಿದೆ. ಮಂತ್ರಿಮುಖ್ಯರು ಬೆರಗಾಗಿ ಅರಸನ ವಿರಹಬಾಧೆಯ ನಿವಾರಣೋಪಾಯಕ್ಕೆ ಪ್ರಯತ್ನಿಸುವರು—ಅಗ್ನಿಗೆ ಆಜ್ಯ ಸುರಿದಂತೆ.

...ಬೆಳುದಿಂಗಳಿಗೆ ಬೇಳಾಗಿ
ಮಾವಿಂಗೆ ಮರುಳಾಗಿ ಮಲ್ಲಿಗೆಗೆ ತಲ್ಲಣಿಸಿ
ತಾವರೆಗೆ ತನಗುಂದಿ ತಿಳಿಗೊಳಕೆ ಹಳಹಳಿಸಿ
.................................
ಮನದೊಳು ಮಹಾದೇವಿ ಕಣ್ಣೊಳು ಮಹಾದೇವಿ
ಬನದೊಳು ಮಹಾದೇವಿ ಸೋಂಕಿತು ಮಹಾದೇವಿ.

ವಿರಹ ಶಿಖರದ ತುತ್ತತುದಿಗೇರುವನು, ಚರಮಗೀತೆಯನ್ನು ಹಾಡುವನು.

"ಮಹದೇವಿಯಂ ಕಂಡೊಡುಳಿವೆನಲ್ಲದೊಡಳಿವೆ" ಉನ್ಮತ್ತನಾಗಿ ಎಲ್ಲರನ್ನೂ ಗರ್ಜಿಸುವನು. ಮರುಳನಂತೆ ಕನವರಿಸಿ ಕೂಗಾಡುವನು. ತ್ವರೆಯಿಂದ ವಸಂತಕ ಚಾರನನ್ನು ಬರಮಾಡುವರು. "ಚಚ್ಚರ"ದ ಆಜ್ಞೆ ಹೊರಡು ವುದು. ಶಿವಭಕ್ತನ ಮನೆಗೆ ಧಾವಿಸುವನು, ಅರಸನ ಬವಣೆ ಯನ್ನು ಬಣ್ಣಿಸುವನು.

"ಮಹದೇವಿಯರ ಕರುಣವೇ ಹರಣವಿನ್ನೆಂದು" ಬಿನ್ನವಿ ಸುವನು, ವಿವಾಹಕ್ಕೆ ವಿಜ್ಞಾಪಿಸಿಕೊಳ್ಳುವನು, ಅರಸನ ಶಕ್ತಿ ಸಾಮರ್ಥ್ಯ, ನಿಷ್ಠುರತೆ, ಚಿತ್ತವೃತ್ತಿಯ ಎಚ್ಚರಿಕೆ

ಕೊಡುವನು, ಅನಿವಾರ್ಯವಾಗಿ ಶಿವಭಕ್ತರು ಮಗಳನ್ನು ವಿವಾಹಕ್ಕೆ ಒಲಿಸಲುಪಕ್ರಮಿಸುವರು.

"ಎನೆ ಧಿಗಿಲು ಭುಗಿಲೆಂದು ಕೋಪಿಸಿದಳಾ ಭಕ್ತೆ" ಮನದಲ್ಲಿ ಮಾಹೇಶ್ವರನಿಗೆ ಮೊರೆಯಿಟ್ಟು, ಒತ್ತರದ ಮುನಿಸಿಂದ ವಸಂತಕನನ್ನು ಜಡಿದು ಝುಂಕಿಸುವಳು.

ನಾಗಭೂಷಣನ ಭಕ್ತರಿಗೆ ಭವಿಯು ಸರಿಯಲ್ಲ
ಬೆಳಗಿಂಗೆ ಕತ್ತಲೆಯ ಕೂಟಮುಂಟೇ ಮರುಳೆ
ತಿಳಿವಿಗಜ್ಞಾನದೊಳು ಸಂಗಮುಂಟೇ ಮರುಳೆ

ಅಚ್ಚ ಮಾಹೇಶ್ವರ ಭಕ್ತಳಾದ ಮಹಾದೇವಿ ಸಿಡಿಮಿಡಿಗೊಂಡು ಕೌಶಿಕ ಮಹಾರಾಜನನ್ನು 'ಭವಿ'ಯೆಂದು ತಿರಸ್ಕರಿಸುವಳು. ಪರಸ್ಪರ ವಿರೋಧ ಮನೋವೃತ್ತಿಯ ವಸ್ತುಗಳ ಸಂಗಮ ಸಾಧ್ಯವೇ? ಕವಿ ಕೊಡುವ ಹೋಲಿಕೆ ಯಥಾಯೋಗ್ಯವಾಗಿದೆ. ಸಾತ್ವಿಕ ತಾಮಸ ಕಳೆಗಳ ಕೂಟ, ಬೆಳಕು ಕತ್ತಲೆಗಳ ಬೆಸುಗೆ, ತಿಳಿವು ಅಜ್ಞಾನಗಳ ಬೆರಕೆ ಅಸಾಧ್ಯ. ಮಹಾದೇವಿಯಕ್ಕ ಕೌಶಿಕರು ಆಗಮಿಕ ಮತ್ತು ಲೌಕಿಕದ ಪ್ರತಿನಿಧಿಗಳಾಗಿ ನಿಂತಿರುವರು. ಜಗತ್ತಿನ ವ್ಯಾಪಾರಕ್ಕೆ ಬೆಳಕೂ ಬೇಕು, ಕತ್ತಲೆಯೂ ಬೇಕು. ಬೆಳಕಾದ ಮೇಲೆ ಕತ್ತಲೆ, ಕತ್ತಲೆಯ ನಂತರ ಬೆಳಕು ಜಗತ್ತಿನ ನಿಯಮ. ಕವಿ ಪಾತ್ರಧಾರಿಗಳನ್ನು ಹೋರಾಟಕ್ಕೆ ಹುರಿಗೊಳಿಸುತ್ತಿರುವನು. ಆಗಮಿಕ ಲೌಕಿಕಗಳ ಮಧ್ಯ ಸೇತುಬಂಧನಕ್ಕೆ ಸಡಗರಿಸುವನು. ಬೆಳಕುಕತ್ತಲೆಗಳನ್ನು ಹೆಣೆದು ಲೋಕೋದ್ಧಾರ ಮಾಡಲು ಹವಣಿಸುವನು.

ಬೆಕ್ಕಸಬೆರಗಾಗಿ ವಸಂತಕ ಒಂದೇ ಉಸುರಿನಲ್ಲಿ ಓಡಿ ಬರುವನು,

ಹರಯವೇ ಕೌತುಕಂ ಹರಭಕ್ತಿಯದ್ಭುತಂ
ಚರಿತವೇ ಮೋಹನಂ ವೈರಾಗ್ಯ ಉನ್ನತಂ
ರೂಪೇ ವಿಚಿತ್ರಂ ಶಿವಜ್ಞಾನ ಊರ್ಜಿತಂ

ಕಾರಣಿಕ ವ್ಯಕ್ತಿಗಳ ಜೀವನದಲ್ಲಿ ಕಂಡುಬರುವ ಗುಣಾಂಶಗಳನ್ನು ಕೇಳಿದ ಅರಸ "ನೆರೆ ಮುಚ್ಚಿಯೊಳ್ ಸಂದನು", ಮಂತ್ರಿಗಳಿಗೆ ಅಭೇದ್ಯ ರಹಸ್ಯವಾಯಿತು. ಶೈತ್ಯೋಪಚಾರಕ್ಕೆ ಎಚ್ಚೆತ್ತ ಮಹಾರಾಜನು "ತನ್ನಿರೇ ಏನೆಂದಳೆಂದುದನೊಡಂಬಟ್ಟು" ಶಿವಭಕ್ತನ ಮನೆಗೆ ಧಾವಿಸಿದ ಮಂತ್ರಿಗಳ ಕಠೋರವಾಣಿ:

ಕೂಸು ಕೊಡದಿರ್ದೊಡೀಗಂ ಕೊಲಲು ಬೆಸಸಿದಂ
ಕೂಸು ಕೊಟ್ಟೊಡೆ ನಿಮಗೆ ಸಕಲ ಸಂಪದಂ

ಶಿವಭಕ್ತ ಶಿವಭಕ್ತೆಯರು ಚಿಂತಾಕ್ರಾಂತರಾಗುವರು. ದುಗುಡ ದುಮ್ಮಾನಕ್ಕೆ ತುತ್ತಾಗುವರು. ಮಗಳ ಮನವೊಲಿಸಲು ಕಾರಿಕಲಮ್ಮೆ, ಹೇರೂರ ಹೆಂಗೂಸು, ವೈಜಕ್ಕವ್ವೆ, ಮಾಂಗಾಯಕ್ಕ ಮುಂತಾದ ಶಿವಶರಣೆಯರು ಭವಿಯೊಡನೆ ಸಂಸಾರ ಮಾಡಿದ ನಿದರ್ಶನಗಳನ್ನೊಡ್ಡುವರು. ಅಕ್ಕಳ ಹೃದಯ ಇರಿತದಿಂದ ತತ್ತರಿಸುವುದು. ಕರುಳಿನಲ್ಲಾಡಿದ ಕತ್ತರಿಯಿಂದ ಮಮ್ಮಲ ಮರುಗುವಳು.

ಏನಾಗಿಯಾದೊಡಂ ಭಕ್ತರಂ ರಕ್ಷಿಪುದು
ನಾನಾ ವಿಧಂ ಬಂದು ಶರಣರಂ ಸಲಹುವುದು

ಸಾತ್ವಿಕ ನಿರ್ಧಾರ ಲೋಕ ನಾಟಕಕ್ಕೆ ಆದರ್ಶವಾಗುತ್ತದೆ. ಪುರಾತನದ ಸತ್ಯವಚನಕ್ಕೆ ಮಾರುಹೋಗಿ ಶರಣರ ರಕ್ಷಣೆಗೆ ಟೊಂಕ ಕಟ್ಟುವಳು, ಮಂತ್ರಿವರೇಣ್ಯರಿಗೆ ತನ್ನ ನಿಯಮ ಕಟ್ಟಳೆಗಳನ್ನು ನಿರೂಪಿಸುವಳು.

ನೀನೆಂದುದಂ ಮಾಳ್ಪೆನಂತದಕ್ಕೆರಡಿಲ್ಲ
ನೀವೆನ್ನ ಮನದೊಳಿದ್ದಂತೆ ಮಾಡುವುದೆಲ್ಲ
ಎನ್ನಿಚ್ಛೆಯೊಳು ಶಿವನ ಪೂಜೆಯೊಳು ನಲಿದಿಪ್ಪೆ
ಎನ್ನಿಚ್ಛೆಯೊಳು ಮಹೇಶ್ವರರ ಗೋಷ್ಠಿಯೊಳಿಪ್ಪೆ
ಎನ್ನಿಚ್ಛೆಯೊಳು ಗುರುವಿನಂಘ್ರಿ ಸೇವೆಯೊಳಿರ್ಪೆ
....................................
ಇಲ್ಲಿ ಮೂರುಂ ತಪ್ಪನೇ ಸೈರಿಸುವೆನರಿದು
ಅಲ್ಲಿಂದ ಬಳಿಕ ಒಲಿದಂತಿಪ್ಪೆ ನಾನುಳಿದು

ಮಹಾದೇವಿಯಕ್ಕಳ ದಿವ್ಯಜೀವನದ ಬಹುಮುಖ್ಯವಾದ ಹಂತ. ಮುಂದಿನ ಭವ್ಯಜೀವನಕ್ಕೆ ಜ್ಯೋತಿಯ ಪ್ರಕಾಶ ನೀಡುವ ದೀಪಸ್ತಂಭ. ಲೌಕಿಕದಲ್ಲಿ ಪಾರಮಾರ್ಥಿಕ ಸಾಧಿಸುವ ಬಗೆ. ಕಮಲ ಪಂಕದಲ್ಲಿ ಬೆಳೆದು ನೀರಿನಲ್ಲಿ ಜೀವಿಸಿದರೂ ಅದರ ಸಂಪರ್ಕರಾಹಿತ್ಯದಂತೆ, ಅಕ್ಕಳ ಜೀವನ ಭೋಗಭೂಮಿಯನ್ನು ಪ್ರವೇಶಿಸಿದರೂ ಅವಳ ಅಂತರ್ಯ ಯೋಗಾಭಿಮುಖವಾಗುತ್ತದೆ. ಮಂತ್ರಿವರ್ಯರು ಕರಾರಿಗೊಡಂಬಟ್ಟು, ಕಾಗದಪತ್ರಗಳನ್ನು ಹಿರಿಯರ ಸಮುಖದಲ್ಲಿ ಬರೆಯಿಸುವರು. ಮಹಾ ದಿಗ್ವಿಜಯ ಸಾಧನೆಯ ಸಾಹಸ ಅರಸನಿಗೆ ಅರುಹುವರು. ಕೌಶಿಕ ಹಿಗ್ಗಿ ಹೊರೆಯೇರಿ ಕೊನರಿ ಕೊಬ್ಬುವನು. ತಾಮಸ ಶಕ್ತಿ ಕೇಕೆ ಅಟ್ಟಹಾಸದಿಂದ ತಾಂಡವ ನೃತ್ಯಕ್ಕಿಳಿಯುವುದು. ಕಾರ್ಯಸಿದ್ಧಿಗೆ ಕಾರಣರಾದವರನ್ನು 'ತೆಗೆದಪ್ಪಿ' ಉಡುಗೊರೆ ಕೊಟ್ಟು ಸನ್ಮಾನಿಸುವನು. ಮುಂದಿನ ಲೋಕ ನಾಟಕಕ್ಕೆ ರಂಗಭೂಮಿ ಸಿದ್ಧವಾಗುತ್ತದೆ. ಲೌಕಿಕ ಪಾರಮಾರ್ಥಿಕಗಳೆರಡು ಬಣ್ಣ ಬಳಿದುಕೊಂಡು ಅಭಿನಯಕ್ಕೆ ಸನ್ನದ್ಧವಾಗುತ್ತವೆ. ತೆರೆಯೇಳುವುದು, ನಾಟಕ ಆರಂಭವಾಗುವುದು, ಪ್ರೇಕ್ಷಕರು ಕಣ್ಣು ತೆರೆಯುವರು. (ಸಶೇಷ)

———

# ಕನ್ನಡದ ಶುಭೋದಯು

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಈ ಹೇಳಿಕೆಯನ್ನಿತ್ತಿದ್ದಾರೆ.

ಕನ್ನಡ ರಾಜ್ಯೋದಯವಾಗಿ ಆರು ವರ್ಷಗಳಾದರೂ ನಮ್ಮ ರಾಜ್ಯಕ್ಕೆ ಕರ್ಣಾಟಕ ಎಂದು ಹೆಸರಾಗಲಿಲ್ಲ, ಕನ್ನಡ ರಾಜ್ಯದ ಭಾಷೆಯಾಗಲಿಲ್ಲ, ಅಕ್ಕಪಕ್ಕದ ಗಡಿಗಳು ರಾಜ್ಯಕ್ಕೆ ಸೇರಲಿಲ್ಲ, ಕನ್ನಡ ಮಾಧ್ಯಮವಾಗಲಿಲ್ಲ, ಕನ್ನಡ ಕಲಾವಿದರಿಗೆ ತಕ್ಕಷ್ಟು ಮನ್ನಣೆಯಾಗಲಿಲ್ಲ ಎಂಬ ಕೂಗು ಎಲ್ಲೆಲ್ಲಿಯೂ ಕೇಳಿಬರುತ್ತಿದೆ. ಪರಿಷತ್ತು ತನ್ನ ಈ ಹೆಬ್ಬಯಕೆಯ ಸಾಧನೆಗಾಗಿ ೪೭ ವರ್ಷಗಳಿಂದ ಕೈಲಾದಷ್ಟು ಪ್ರಯತ್ನವನ್ನು ನಡೆಸುತ್ತಿದೆ. ವಿಶೇಷ ಸಂದರ್ಭಗಳಲ್ಲಿ, ಸಮ್ಮೇಳನಗಳಲ್ಲಿ ಪರಿಷತ್ತು ಮೇಲೆಕಂಡ ವಿಚಾರಗಳಿಗಾಗಿ ತನ್ನ ನಿಶ್ಚಿತವಾದ ನಿಲುವನ್ನು ಅಭಿವ್ಯಕ್ತಪಡಿಸಿದೆ. ಘಟನಾತ್ಮಕವಾದ ರೀತಿಯಿಂದ ಈಗಲೂ ಈ ತತ್ವಸಾಧನೆಗಾಗಿ ಪ್ರಯತ್ನಿಸುತ್ತಿದೆ.

ಕಾಸರಗೋಡು, ಹೊಸೂರು, ಮಡಕಶಿರ, ಆದವಾನಿ, ಸೊಲ್ಲಾಪುರ, ಜತ್ತ, ಗೋವಾ ಮೊದಲಾದ ಗಡಿ ಪ್ರದೇಶಗಳಲ್ಲಿ ಕನ್ನಡವನ್ನು ಪ್ರಚಾರಮಾಡುವ ಬಗೆಗೆ ಕಾರ್ಯಕ್ರಮವನ್ನು ಕೈಗೊಂಡಿದೆ. ಇನ್ನು ಮುಂದೆ ನಡೆಯುವ ಸಾಹಿತ್ಯ ಸಮ್ಮೇಳನಗಳನ್ನು ಅಖಿಲ ಭಾರತದ ಮಟ್ಟದಲ್ಲಿ ನಡೆಸಬೇಕೆಂದು ತೀರ್ಮಾನಿಸಿದೆ. ಕನ್ನಡ–ಕನ್ನಡ ಕೋಶದ ಮುದ್ರಣವನ್ನು ಕೈಗೊಂಡಿದೆ. ದಿಲ್ಲಿ, ಮುಂಬೈ, ಮದರಾಸು, ಹೈದರಾಬಾದು, ಮೊದಲಾದ ದೂರದೂರುಗಳಲ್ಲಿ ಇರುವ ಕನ್ನಡ ಸಂಘಗಳ ಬಾಂಧವ್ಯವನ್ನು ಹೆಚ್ಚು ಬೆಳೆಸಿಕೊಂಡಿದೆ. ಪರಿಷತ್ತಿನ ಈ ಮುಂದಿಟ್ಟ ಹೆಜ್ಜೆ ಕನ್ನಡದ ಪ್ರಗತಿಗೆ ನೆರವಾದೀತೆಂದು ನಂಬಲಾಗಿದೆ.

ಇತ್ತೀಚೆಗೆ ಬೆಂಗಳೂರು ನಗರ ಸಭೆಯು ಮೇಯರ್ ಶ್ರೀ ವಿ. ಎಸ್. ಕೃಷ್ಣ ಐಯ್ಯರ್ ಅವರ ನೇತೃತ್ವದಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಅಂಗೀಕರಿಸಿ ಕನ್ನಡದ ಧ್ವಜವನ್ನು ಬೆಂಗಳೂರಿನಲ್ಲಿ ಎತ್ತಿ ನಿಲ್ಲಿಸಿದೆ. ಮಾನಪತ್ರ ಮತ್ತು ಆಹ್ವಾನಪತ್ರಗಳನ್ನು ಕನ್ನಡದಲ್ಲಿಯೇ ಅಚ್ಚುಮಾಡುತ್ತಿದೆ. ಈ ಭಾವನೆಯನ್ನೇ ಮುಂದುವರಿಸಿ ನಗರಸಭೆ ಬೆಂಗಳೂರಿನ ಮಾರ್ಗಗಳಿಗೆ, ಉಪವನಗಳಿಗೆ, ಕೂಟಗಳಿಗೆ, ಕನ್ನಡ ಕವಿಗಳ, ಕಲಾವಿದರ, ಸಂತರ ಹೆಸರುಗಳನ್ನು ಇಡುವ ಕಾರ್ಯವನ್ನು ಪ್ರಾರಂಭಿಸಬೇಕೆಂದು ಬಿನ್ನೈಸುತ್ತೇನೆ. ಈ ಆದರ್ಶವನ್ನೇ ಕರ್ಣಾಟಕದ ಶಿವಮೊಗ್ಗ ಮೊದಲಾದ ಇತರ ನಗರಸಭೆಯವರೂ ಅಂಗೀಕರಿಸುತ್ತಿರುವುದು ಶುಭಪ್ರದವಾಗಿದೆ.

ಕನ್ನಡ ನಾಡು ನುಡಿಗಳ ಅಭಿಮಾನಿಗಳಾದ ಶ್ರೀ ಎಂ. ಸೀತಾರಾಮ ಶಾಸ್ತ್ರಿಗಳು, ಶ್ರೀ ಅ. ನ. ಕೃಷ್ಣರಾಯರು, ಶ್ರೀ ಎಂ. ರಾಮಮೂರ್ತಿಯವರು ಇತ್ಯಾದಿ ಗಣ್ಯ ಸಾಹಿತಿಗಳು ಕರ್ಣಾಟಕದ ರಾಜಧಾನಿಯಾಗಿದ್ದರೂ ಅನ್ಯ ಭಾಷೆಗಳ ಕೋಲಾಹಲಕ್ಕೆ ಈಡಾಗಿರುವ ಬೆಂಗಳೂರಿನಲ್ಲಿ ಕನ್ನಡದ ಚಳುವಳಿಯನ್ನು ಹಲವಾರು ಮಂದಿ ಉತ್ಸಾಹೀ ತರುಣರ ನೆರವಿನಿಂದ ಕೈಗೊಂಡು ನಡೆಸುತ್ತಿರುವುದೂ, ಅದರ ಪರಿಣಾಮವಾಗಿ ನಗರದಲ್ಲಿ ಕನ್ನಡ ವಿಳಾಸದ ಹೊಸ ಹೊಸ ಹಲಗೆಗಳು ಕಂಗೊಳಿಸುತ್ತಿರುವುದೂ ಸ್ವಾಗತಾರ್ಹವಾಗಿದೆ. ಮೇಲೆ ಕಂಡ ಮಹನೀಯರು ಅಹಿಂಸಾತ್ಮಕವಾಗಿ, ಘಟನಾತ್ಮಕವಾಗಿ ಚಳುವಳಿಯನ್ನು ಮುಂದುವರಿಸುತ್ತಿರುವರೆಂದು ನಾನು ನಂಬುತ್ತೇನೆ. ಮಾನ್ಯ ಮುಖ್ಯಮಂತ್ರಿಗಳನ್ನು ಕಂಡು ಅವರ ಮನವನ್ನು ಒಲಿಸಿದುದು, ತಮಿಳು ಮೊದಲಾದ ಇತರ ಭಾಷಾ ಸಹೋದರರನ್ನು ತಮ್ಮ ಕಾರ್ಯಕ್ಕೆ ಬೆಂಬಲವಾಗಿ ಮಾಡಿಕೊಂಡುದು, ನಾಡಿನ ಇತರ ಭಾಗಗಳಲ್ಲಿ ಈ ಕಾರ್ಯಕ್ಕಾಗಿ ಯುವಕರನ್ನು ಹುರಿದುಂಬಿಸಿದುದು, ಇವೆಲ್ಲವೂ ಮೆಚ್ಚತಕ್ಕ ಕಾರ್ಯವಾಗಿದೆ. ಕನ್ನಡವು ಭಾರತದ ಅತ್ಯಂತ ಪ್ರಾಚೀನವಾದ ಹಾಗೂ ರಾಜ್ಯಾಂಗದತ್ತವಾದ ೧೪ ಭಾಷೆಗಳಲ್ಲಿ ಒಂದಾಗಿದೆ. ಶತಮಾನಗಳ ಕಾಲದಿಂದ ಅನೇಕ ರಾಜ್ಯ ಸಾಮ್ರಾಜ್ಯಗಳ ಆಡಳಿತ ಭಾಷೆಯೆಂದು ಗೌರವವನ್ನು ಪಡೆದಿದೆ.

ಕರ್ಣಾಟಕದಲ್ಲಿಯೂ ಭಾರತದಲ್ಲಿಯೂ, ಸುಮಾರು ಎರಡು ಕೋಟಿ ಐವತ್ತು ಲಕ್ಷ ಜನರು ಈ ಭಾಷೆಯನ್ನು ಮಾತನಾಡುತ್ತಿದ್ದಾರೆ. ಮಹಾರಾಷ್ಟ್ರದಲ್ಲಿ ಮರಾಠಿಗೆ, ಆಂಧ್ರದಲ್ಲಿ ತೆಲುಗಿಗೆ, ಮದರಾಸಿನಲ್ಲಿ ತಮಿಳಿಗೆ, ಗುಜರಾತಿನಲ್ಲಿ ಗುಜರಾತಿಗೆ, ಉತ್ತರ ಭಾರತದಲ್ಲಿ ಹಿಂದಿಗೆ. ಇರುವ ಸ್ಥಾನಮಾನಗಳು ಕರ್ಣಾಟಕದಲ್ಲಿ ಕನ್ನಡಕ್ಕೂ ಇರಬೇಕಾದುದು ಅಗತ್ಯವಾಗಿದೆ. ಅದಕ್ಕಾಗಿ ಸರ್ಕಾರದವರೂ, ಸಾರ್ವಜನಿಕರೂ, ಸ್ತ್ರೀಯರೂ, ಪುರುಷರೂ, ಹಿರಿಯರೂ, ಕಿರಿಯರೂ, ಕನ್ನಡದ ಏಳಿಗೆಗಾಗಿ ಎಲ್ಲರೂ ಸತತವಾಗಿ ಪ್ರಯತ್ನಿಸಬೇಕು. ಸರ್ವಾಂಗ ಸುಂದರವಾದ ಕರ್ಣಾಟಕದಲ್ಲಿ ಸುಪ್ರೌಢವಾದ ಮತ್ತು ಸುಂದರವಾದ ಕನ್ನಡ ಭಾಷೆ ಕಳೆಗೊಳ್ಳಬೇಕೆಂಬುದೇ ಪರಿಷತ್ತಿನ ಹೆಬ್ಬಯಕೆ. ಮುಖ್ಯವಾಗಿ ಕನ್ನಡದ ಶುಭೋದಯ ಕಂಡುಬರುತ್ತಿದೆ. ಕನ್ನಡ ಏಳಿಗೆಯಾದರೆ ಕರ್ಣಾಟಕ ಏಳಿಗೆಯಾಗುತ್ತದೆ. ಕನ್ನಡಿಗರು ಪ್ರಗತಿಯನ್ನು ಹೊಂದುತ್ತಾರೆ. ಕನ್ನಡ ಆತ್ಮ; ಕರ್ಣಾಟಕ ದೇಹ ಎಂಬುದನ್ನು ಎಲ್ಲರೂ ಸ್ಮರಣೆಯಲ್ಲಿಟ್ಟಿರಬೇಕು.

# ಗ್ರಂಥಾವಲೋಕನ

ಅಮರ ಗಾಂಧೀಜಿ: (ಸಾಗ್ರ ಸಂಗೀತ ನಾಟಕ) ಲೇಖಕರು: ಶ್ರೀ ಎಂ. ಎಂ. ವಡ್ಡರ, ರೋಣ. ಪ್ರಕಾಶಕರು: ಪಿ. ಸಿ. ಶ್ಯಾಬಾದಿಮಠ, ಗದಗ. ಬೆಲೆ: ರೂ. ೧-೦೦.

ಭಾರತದ ಭಾಗ್ಯವಿಧಾತ ಮಹಾತ್ಮ ಗಾಂಧಿಯವರ ಅವಸಾನವನ್ನು ಕುರಿತ ನಾಟಕ ಇದು. ಈ ನಾಟಕದ ಕಥಾವಸ್ತು ಸರ್ವರಿಗೂ ಸುಪರಿಚಿತವಾಗಿದೆ.

'ಕಾವ್ಯೇಷು ನಾಟಕಂ ರಮ್ಯಂ' ಎಂಬ ಆರ್ಯೋಕ್ತಿಯಂತೆ ಕಾವ್ಯಗಳಲ್ಲೆಲ್ಲಾ ನಾಟಕವೇ ಅತ್ಯಂತ ರಮ್ಯವಾದುದು. ಈ ನಾಟಕ ಕಲೆಗೆ ಪ್ರಾಚೀನ ಭಾರತದಲ್ಲಿ ವಿಶಿಷ್ಟ ಸ್ಥಾನವಿತ್ತು. ನಾಟಕಗಳನ್ನು ರಂಗಭೂಮಿಯ ಮೇಲೆ ಅಭಿನಯಿಸಿ ಆನಂದಿಸುತ್ತಿದ್ದ ಕಾಲ ಈಗ ಮರೆಯಾಗತೊಡಗಿದೆ. ಕಾರಣ ಜನರಲ್ಲಿ ಅಭಿರುಚಿ, ಆಸಕ್ತಿ, ಪ್ರೋತ್ಸಾಹ ಕಡಿಮೆಯಾಗುತ್ತಿರುವುದು. ಈಗ ಅಪ್ಪಿತಪ್ಪಿ ಉಳಿದುಕೊಂಡಿರುವ ಕೆಲವು ನಾಟ್ಯಮಂಡಲಿಗಳೂ ದುರ್ದೆಶೆಯಲ್ಲಿವೆ. ಕಾಲಾಂತರದಲ್ಲಿ ಇವು ಸಂಪೂರ್ಣವಾಗಿ ಮಾಯವಾಗಬಹುದೆಂಬ ಭೀತಿಯೂ ಕಂಡುಬರುತ್ತಿದೆ. ಇಂತಹ ಪರ್ವಕಾಲದಲ್ಲಿ ನಾಟಕಗಳನ್ನು ರಚಿಸುವಷ್ಟೇ ಅಲ್ಲ, ಅವನ್ನು ರಂಗಭೂಮಿಯಮೇಲೆ ಅಭಿನಯಿಸುವಂತೆ ಮಾಡುವುದು ಒಂದು ಸಾಹಸವೇ ಸರಿ. ಪ್ರಕೃತ ಲೇಖಕರಾದ ಶ್ರೀ ಎಂ. ಎಂ. ವಡ್ಡರ, ಅವರು ಈ ದಿಸೆಯಲ್ಲಿ ಸ್ವಲ್ಪಮಟ್ಟಿನ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಪರದಾಸ್ಯದಲ್ಲಿ ಹಲವಾರು ವರ್ಷಗಳಿಂದ ತೊಳಲುತ್ತಿದ್ದ ಭರತದೇಶಕ್ಕೆ ಸ್ವಾತಂತ್ರ್ಯದ ನಂದಾದೀವಿಗೆಯನ್ನು ತಂದವರು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು. ಅವರು ಸ್ವಾತಂತ್ರ್ಯ ಸಾಧನೆಗೆ ಕೈಕೊಂಡ ಮೂರು ಮಹಾಸ್ತ್ರಗಳು ಸತ್ಯ, ದಯೆ ಮತ್ತು ಅಹಿಂಸೆ. ಈ ತತ್ವಗಳು ಸಾರ್ವಕಾಲಿಕ ಮತ್ತು ಸಾರ್ವದೇಶಿಕವಾದುವು. ಇಂತಹ ಮಹಾತ್ಮರೂ ಕೂಡ ಅಕಾಲ ಮೃತ್ಯುವಿಗೆ ತುತ್ತಾಗಬೇಕಾಯಿತು. ಅದಕ್ಕೆ ಕಾರಣ ಗಾಂಧೀಜಿಯವರ ಸರ್ವ ಸಮನ್ವಯದೃಷ್ಟಿ. ಭಾರತೀಯರೆಲ್ಲ ಒಂದೇ ಎಂಬ ತತ್ವ ಹಲವರಿಗೆ ಸರಿಗಾಣದೇ ಹೋದುದು.

ಗಾಂಧೀಜಿಯವರ ತತ್ವವಿರೋಧಕರಲ್ಲಿ ನಾಥುರಾಮ ಘೋಡ್ಸೆ, ಸಾವರಕರ, ಆಪ್ಟೆ, ದಿಗಂಬರ ಮುಂತಾದವರು ಅಗ್ರಗಣ್ಯರು. ಅವರೆಲ್ಲ ಹಿಂದೂ ಮಹಾಸಭೆಯವರು. ಹಿಂದೂ ಮುಸ್ಲಿಮರು ಒಂದೇ ಎಂಬ ಗಾಂಧೀಜಿಯವರ ಮತ ಇವರಿಗೆ ಹಿಡಿಸದಾಯಿತು. ಅದಕ್ಕಾಗಿ ಗಾಂಧೀಜಿಯವರನ್ನೇ ಏಕೆ ಅವರ ಜೊತೆಯಲ್ಲಿ ನೆಹರು, ಸುಹ್ರಾವರ್ದಿ, ಮುಂತಾದವರನ್ನೂ ಕೊಲೆ ಮಾಡಬೇಕೆಂದು ಸಂಚು ನಡೆಸಿದರು. ಕೊನೆಗೆ ಗಾಂಧೀಜಿಯವರ ಪ್ರಾಣವನ್ನು ತೆಗೆದುಕೊಂಡರು.

ಅಮರ ಗಾಂಧೀಜಿ ಒಂದು ರಾಜಕೀಯ ನಾಟಕ. ರಾಜಕೀಯ ಕಥಾವಸ್ತುವನ್ನುಳ್ಳ ನಾಟಕಗಳು ರಂಗಭೂಮಿಯಮೇಲೆ ಅಷ್ಟಾಗಿ ಪ್ರಸಿದ್ಧಿಗೆ ಬರಲಾರವು. ಅಲ್ಲದೆ ಇದು ಒಂದು ದುರಂತ ನಾಟಕ. ಭಾರತೀಯರ ಮನಸ್ಸಿಗೆ ದುರಂತ ನಾಟಕಗಳು ಅಷ್ಟಾಗಿ ಹಿಡಿಸುವುದಿಲ್ಲ. ಇಂತಹ ಸ್ಥಿತಿಯಲ್ಲೂ ರಾಜಕೀಯ ನಾಟಕಗಳು ಅವಶ್ಯ ಎಂದು ನಮಗನ್ನಿಸುತ್ತದೆ. ಏಕೆಂದರೆ ಜನರಲ್ಲಿ ರಾಷ್ಟ್ರದ ಬಗ್ಗೆ ಜಾಗೃತಿಯನ್ನುಂಟುಮಾಡಲು ಇವುಗಳಿಂದ ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಶ್ರೀ ಎಂ. ಎಂ. ವಡ್ಡರ ಈ ಕಾರ್ಯ ಸ್ತುತ್ಯವಾದುದು. ನಾಟಕ ತೀರ ನೀರಸವಾಗಬಾರದೆಂಬ ಉದ್ದಿಶ್ಯದಿಂದ ಲೇಖಕರು ಒಂದೆರಡು ಉಪಕತೆಗಳನ್ನೂ ಸೇರಿಸಿದ್ದಾರೆ.

ಶ್ರೀ ಎಂ. ಎಂ. ವಡ್ಡರ ಅವರು ವೃತ್ತಪತ್ರಿಕೆಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಮಹಾತ್ಮರ ಮರಣವನ್ನು ನಾಟಕದಿಂದ ನಿರೂಪಿಸಿದ್ದಾರೆ. ಈ ನಾಟಕದ ಯಾವುದೇ ಪಾತ್ರದ ಪರಿಚಯವನ್ನು ಇಲ್ಲಿ ಮಾಡಿಕೊಡಬೇಕಾಗಿಲ್ಲ. ಎಲ್ಲ ಪಾತ್ರಗಳೂ ಎಲ್ಲರಿಗೂ ಪರಿಚಿತವಾಗಿಯೇ ಇವೆ. ಈ ನಾಟಕದ ಭಾಷೆ ತೀರ ಪ್ರಾದೇಶಿಕವಾದುದು. ಅನೇಕ ಕಡೆ ಇದು ಸಂಪೂರ್ಣವಾಗಿ ಅರ್ಥವಾಗಲಾರದು. ಅಲ್ಲದೆ ಇದರಲ್ಲಿ ಹಲವಾರು ಪ್ರಾಂತೀಯ ಪ್ರಯೋಗಗಳೂ, ಅಪಶಬ್ದಗಳೂ ಸೇರಿಕೊಂಡಿವೆ. ನಾಟಕ ಸಾರ್ವತ್ರಿಕವೂ ಸಾರ್ವಕಾಲಿಕವೂ ಆಗಿರಬೇಕು. ಲೇಖಕರು ಇತ್ತ ಗಮನಕೊಟ್ಟಂತೆ ಕಂಡುಬರುವುದಿಲ್ಲ. ಇಷ್ಟಾದರೂ ಈ ರಾಜಕೀಯ ಕಥಾವಸ್ತುವನ್ನು ನಾಟಕಕ್ಕೆ ಅಳವಡಿಸಿಕೊಂಡು ರಚಿಸುವುದು ತುಸು ದುಸ್ತರವಾದುದೇ. ಶ್ರೀ ಎಂ. ಎಂ. ವಡ್ಡರ ಅವರು ಈ ಅಂಶದಲ್ಲಿ ಜಯಶೀಲರಾಗಿದ್ದಾರೆ. ಒಟ್ಟಿನಲ್ಲಿ ಇದು ಸಾಮಾನ್ಯ ಜನಕ್ಕಾಗಿ ಬರೆದ ರಂಗಭೂಮಿಯ ಮೇಲೆ ಅಭಿನಯಿಸಬಹುದಾದ ನಾಟಕ. ರಾಷ್ಟ್ರದ ಬಗ್ಗೆ ಜಾಗೃತಿಯನ್ನುಂಟುಮಾಡಬಹುದಾದ ನಾಟಕ. ಇಂತಹ ಕೆಲವು ನಾಟಕಗಳನ್ನು ಪ್ರಕೃತ ಲೇಖಕರು ಈಗಾಗಲೇ ರಚಿಸಿದ್ದಾರೆ. ಮತ್ತೆ ಇಂತಹ ಹಲವಾರು ನಾಟಕಗಳನ್ನು ಶ್ರೀಯುತರು ರಚಿಸಲಿ ಎಂದು ನಾವು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

—ಎನ್. ಬಸವಾರಾಧ್ಯ.

ಶಿವಸಂಕಲ್ಪ: ಲೇಖಕರು: ಶ್ರೀ ಚಿ. ಸದಾಶಿವಯ್ಯ, ಬೆಂಗಳೂರು. ಪ್ರಕಾಶಕರು: ಶ್ರೀ ಸಿರಿಯಾಳದೇವ ಭಕ್ತಮಂಡಲಿ, ವಿಜಯಪುರ, ಬೆಂಗಳೂರು ಜಿಲ್ಲೆ. ಪುಟಗಳು ೭೮. ಆಕಾರ ಕ್ರೌನ್ ೧/೮. ಬೆಲೆ: ರೂ. ೧-೦೦.

ಈಗಾಗಲೇ ಕನ್ನಡಿಗರಿಗೆ ಚಿರಪರಿಚಿತರಾಗಿರುವ ಶ್ರೀ ಚಿ. ಸದಾಶಿವಯ್ಯನವರು ಬರೆದ ನಾಟಕವಿದು. ಮಹಾ ಶಿವಭಕ್ತ ಶ್ರೀ ಸಿರಿಯಾಳದೇವರ ದಿವ್ಯಚರಿತ್ರೆಯನ್ನು ಬಹು ಸ್ವಾರಸ್ಯವಾಗಿ ನಾಟಕರೂಪದಲ್ಲಿ ಬರೆದಿರುತ್ತಾರೆ. ಈ ಪುಸ್ತಕಕ್ಕೆ ಶ್ರೀ ಜೆ. ವಿ. ದೊಡ್ಡವೀರಪ್ಪನವರು ಮುನ್ನುಡಿ ಬರೆದಿರುತ್ತಾರೆ. ಅನೇಕ ಗ್ರಂಥ

ಗಳನ್ನೂ ಶಾಸನಗಳನ್ನೂ ಪರಿಶೀಲನೆ ಮಾಡಿ, ಸಂಶೋಧನೆ ನಡೆಸಿ ಈ ನಾಟಕವನ್ನು ಬರೆಯಲಾಗಿದೆ. "ಭಕ್ತಿ ಕಾರುಣ್ಯ ರಸಗಳನ್ನೇ ಪ್ರಧಾನವಾಗಿ ಪೋಷಿಸಿಕೊಂಡು ರಂಗಭೂಮಿಯ ಚೌಕಟ್ಟಿನಲ್ಲಿ ರಸಭಂಗವಾಗದಂತೆ ವಸ್ತು ನಿರ್ದೇಶಿಸುವ, ಓದುಗಬ್ಬವಲ್ಲದ ನಾಟಕವನ್ನು ರಚಿಸುವ ಕೌಶಲ್ಯವಿರುವುದರ ಜೊತೆಗೆ ಶುದ್ಧ ಸಾಹಿತ್ಯ ನಿರ್ಮಾಣಶಕ್ತಿ, ಶಿವಧರ್ಮನಿರತೆ, ಸಾತ್ವಿಕ ವೃತ್ತಿಗಳನ್ನೇ ಉಳ್ಳ ಕಲಾವಿದರನ್ನೇ ಈ ಕೃತಿ ರಚನೆಗೆ ಆರಿಸಬೇಕಾಯಿತು. ನನ್ನೀ ಮನೋರಥ ಸಾಧನೆಗೆ ಶ್ರೀ ಚಿ. ಸದಾಶಿವಯ್ಯನವರನ್ನು ಆರಿಸಲು ಈ ಮೇಲ್ಕಂಡ ಶಕ್ತಿಗುಣಗಳು ಅವರಲ್ಲಿರುವುದೇ ಕಾರಣ" ಎಂದು ಮುನ್ನುಡಿಕಾರರಾದ ಶ್ರೀ ಜೆ. ವಿ. ದೊಡ್ಡವೀರಪ್ಪನವರು ತಿಳಿಸಿದ್ದಾರೆ. ರಸಪೋಷಣೆ, ಪಾತ್ರ ನಿರ್ದೇಶ ಮತ್ತು ವಸ್ತುವಿನ್ಯಾಸಗಳಿಂದ ಕೃತಿಪೂರ್ಣವಾಗಿದೆ. ಮಹಾಭಕ್ತ ಶ್ರೀ ತಿರುತ್ತೊಂಡರ ಆದರ್ಶದಾಸೋಹ, ರಣಶೌರ್ಯ, ರಾಜನಿಷ್ಠೆ, ಶಿವಭಕ್ತಿ, ಶಿವಾನುಭವ ಇವುಗಳ ನಿರೂಪಣೆ ಮನೋಜ್ಞವಾಗಿವೆ. ಶ್ರೀ ಸದಾಶಿವಯ್ಯನವರು ಇತ್ತೀಚೆಗೆ ಸಿನಿಮಾ ಪ್ರಪಂಚದಲ್ಲಿಯೂ ಹೆಸರುವಾಸಿಯಾಗುತ್ತಿದ್ದಾರೆಂಬ ಅಂಶವನ್ನು ಇಲ್ಲಿ ವಾಚಕರು ಗಮನಿಸಬಹುದು.

ಇಂತಹ ಪುಸ್ತಕಗಳು ಹೇರಳವಾಗಿ ಹೊರಬೀಳಲಿ. ಇಂಥ ನಾಟಕಗಳನ್ನು ಕಲಾವಿದರು ಆಗಾಗ್ಗೆ ಅಭಿನಯಿಸಿ ಪ್ರೋತ್ಸಾಹಿಸಲೆಂದು ಹಾರೈಸುತ್ತೇನೆ.

**ತಾಯಿ ಕಾಣದ ಜೀವ:** ಲೇಖಕಿ ಶ್ರೀಮತಿ ಭುವನೇಶ್ವರಿ ಸಿಂಪಿ. ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಚಡಚಣ. ಕಿರೀಟಾಕಾರ ಅಷ್ಟದಳ. ಪುಟಗಳು ೧೧೦. ಬೆಲೆ ರೂ. ೧-೫೦.

ಉದಯೋನ್ಮುಖ ಲೇಖಕಿಯರಾದ ಶ್ರೀಮತಿ ಭುವನೇಶ್ವರಿ ಸಿಂಪಿಯವರು ಈ ಕಥಾಸಂಗ್ರಹವನ್ನು ರಚಿಸಿ, ಕನ್ನಡಿಗರ ಕೈಯಲ್ಲಿಟ್ಟಿದ್ದಾರೆ. ಪ್ರಸಿದ್ಧ ಲೇಖಕರಾದ ಶ್ರೀ ಸಿಂಪಿ ಲಿಂಗಣ್ಣನವರ ಮಗಳಾದ್ದರಿಂದ ಈಕೆ ಸಾಹಿತ್ಯದ ವಾತಾವರಣದಲ್ಲಿಯೇ ಬೆಳೆದಿರುವರೆಂಬುದು ನಿರ್ವಿವಾದದ ಸಂಗತಿ. ಈ ಸಂಗ್ರಹಕ್ಕೆ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಮಿರ್ಜಿ ಅಣ್ಣಾರಾಯರು ಮುನ್ನುಡಿಯನ್ನು ಬರೆದಿದ್ದಾರೆ.

ಸವತಿ ಮಾತ್ಸರ್ಯದ ಅವಾಂತರವನ್ನು 'ಹೊಟ್ಟೆಯುರಿಯಲ್ಲಿ' ಎಂಬ ಕತೆಯಲ್ಲಿ ನಾವು ಕಾಣಬಹುದು. ಸಂಸಾರ ಸುಖ ತಪ್ಪಿದಾಗ ತನ್ನ ಧ್ಯೇಯ ಸಾಧನೆಗಾಗಿ ಸ್ತ್ರೀಯಾದವಳು ನಿರ್ದೋಷಿಯಾಗಿ ಹೇಗೆ ಶ್ರಮಿಸುವಳು—ಎಂಬುದನ್ನು 'ನಿರ್ದೋಷಿ' ಎಂಬ ಕತೆಯಲ್ಲಿ ಕಾಣಬಹುದು. ಹೆಣ್ಣಿನ ಹೃದಯವನ್ನು ವಿವಿಧ ರೀತಿಯಲ್ಲಿ ಕಂಡು ವರ್ಣಿಸಿರುವ ಚಿತ್ರವನ್ನು 'ಮಂಗಳಸೂತ್ರ'ದಲ್ಲಿ ಕಾಣಬಹುದು. 'ಸೃಷ್ಟಿಯ ಪಾಶ' ಎಂಬ ಕತೆಯೂ ಸ್ವಾರಸ್ಯವಾಗಿಯೂ ಮಾರ್ಮಿಕವಾಗಿಯೂ ಇದೆ. ಉಳಿದ ಕತೆಗಳು ಸಾಧಾರಣವಾಗಿವೆ. ತಾಯಿ ಕಾಣದ ಜೀವ, ನಿರ್ದೋಷಿ, ಎಲ್ಲವೂ ಭಣಭಣ, ಮಂಗಲದ ಸೂತ್ರ, ಸೃಷ್ಟಿಯ ಪಾಶ, ಹೊಟ್ಟೆಯುರಿಯಲ್ಲಿ, ತಿರುಸೋಲು—ಎಂಬ ಒಂಭತ್ತು ಕತೆಗಳನ್ನು ಈ ಸಂಗ್ರಹವು ಒಳಗೊಂಡಿದೆ.

ಒಟ್ಟಿನಲ್ಲಿ ಈ ಕತೆಗಳು ಓದಲರ್ಹವಾಗಿವೆ. ಈ ಪುಟ್ಟ ಪುಸ್ತಕಕ್ಕೆ ಕನ್ನಡಿಗರ ಪ್ರೋತ್ಸಾಹ ಅತ್ಯಗತ್ಯ. ಈ ಲೇಖಕಿಯರಿಂದ ಇನ್ನೂ ಹೆಚ್ಚು ಹೆಚ್ಚು ಪುಸ್ತಕಗಳು ಹೊರಬೀಳುವ ನಿರೀಕ್ಷೆಯಿದೆ.

**ಸ್ತೋತ್ರಮಣಿಮಾಲ:** ಸಂಪಾದಕರು: 'ಸವ್ಯಸಾಚಿ'. ಪ್ರಕಾಶಕರು: ಭಾರ್ಗವಪ್ರಕಾಶನ, ಚಿರೇಮಗಳೂರು. ಕಿರೀಟಾಕಾರ ಅಷ್ಟದಳ. ಪುಟಗಳು ೫೬. ಬೆಲೆ ರೂ. ೧-೦೦.

ಭಾರತೀಯ ವಿವಿಧ ಭಾಷೆಗಳಲ್ಲಿ ಮಹಾ ಭಕ್ತಶ್ರೇಷ್ಠರು ರಚಿಸಿದ ಅಪೂರ್ವ ಹಾಗೂ ಸುಮನೋಹರವಾದ ಸ್ತೋತ್ರಗಳ ಸಂಕಲನವೇ ಈ ಪುಸ್ತಕದ ವೈಶಿಷ್ಟ್ಯ. ಅಂಜಲಿ ಎಂಬ ಶೀರ್ಷಿಕೆಯಲ್ಲಿ ಲೇಖಕರು 'ಕೇಳಿಕೆ-ಹೇಳಿಕೆ' ಎಂದು ಬರೆದಿರುವುದೂ, ಶೈಲಿಯಂತೂ ಬಹಳ ಪುರಾತನವಾಗಿರುವುದೂ ವಾಚಕರು ಮುಖ್ಯವಾಗಿ ಗಮನಿಸಬೇಕಾದ ಅಂಶಗಳು. ಪುಸ್ತಕದ ಆರಂಭದಲ್ಲಿ ವಿಷಯಸೂಚಿಕೆ ಇಲ್ಲದಿರುವುದು ಒಂದು ಕೊರತೆಯಾಗಿದೆ.

ಕೃತಿ ರಚನಕಾರರ ಸಂಕ್ಷಿಪ್ತ ಪರಿಚಯವನ್ನು ಪುಸ್ತಕದ ಕಡೆಯಲ್ಲಿ ಕೊಟ್ಟಿರುವುದು ವಾಚಕರಿಗೆ ತುಂಬಾ ಸಹಾಯಕವಾಗಿದೆ. ನಿತ್ಯವೂ ಪಾರಾಯಣ ಮಾಡುವ ಪದ್ಧತಿಯುಳ್ಳ ಭಕ್ತನಿಗೆ ಇದು ತುಂಬಾ ನೆರವು ನೀಡುವುದರಲ್ಲಿ ಸಂದೇಹವಿಲ್ಲ. ಮುದ್ರಣ ಸಾಧಾರಣವಾಗಿದೆ. ಆದರೆ ಬೆಲೆ ಬಹಳ ಹೆಚ್ಚಾಗಿದೆ. ಕಡಮೆ ಬೆಲೆ ಇದ್ದರೆ ಸಾಮಾನ್ಯರೂ ಸಹ ಕೊಳ್ಳಲು ಅನುಕೂಲವಾಗುತ್ತದೆ. ಒಟ್ಟಿನಲ್ಲಿ ಈ ಪುಸ್ತಕವು ಎಲ್ಲ ಕನ್ನಡಿಗರಿಗೂ ಉಪಯುಕ್ತವಾಗಿದೆ. ಕನ್ನಡಿಗರು ಇಂಥ ಪುಸ್ತಕಗಳಿಗೆ ಪ್ರೋತ್ಸಾಹ ನೀಡುವರೆಂದು ಆಶಿಸಲಾಗಿದೆ.

**ಕಾಗದದ ಕೆಲಸ:** ಲೇಖಕರು: ಶ್ರೀ ಕು. ಎಸ್. ಜಿ. ತೊರಗಲ್ಲ, ಬಿ.ಎ. (ಆನರ್ಸ್), ಎಂ.ಇಡಿ., ಬೆಳಗಾಂವಿ. ಪ್ರಕಾಶಕರು: ಶ್ರೀ ವೆಂ. ಗೋ. ತೊರಗಲ್ಲ. ೮೫/೧ ಬಾಂಧೂರ ಬೀದಿ, ಬೆಳಗಾಂವಿ. ಡೆಮ್ಮಿ ೧/೮. ಪುಟಗಳು: ೮೦. ಬೆಲೆ: ರೂ. ೧-೭೫.

ಕಾಗದಗಳಿಂದ ಎಷ್ಟು ವಿಧವಾದ ಆಕರ್ಷಕ ವಸ್ತುಗಳನ್ನು ನಿರ್ಮಿಸಬಹುದೆಂಬುದನ್ನು ನೀವು ತಿಳಿಯಬೇಕಾದರೆ ಈ ಪುಸ್ತಕವನ್ನು ಓದಲೇಬೇಕು. ಮೊದಲನೇ ಭಾಗದಲ್ಲಿ ತಾಂತ್ರಿಕ ವಿಚಾರಗಳನ್ನೂ ಎರಡನೇ ಭಾಗದಲ್ಲಿ ಪ್ರಾಯೋಗಿಕ ವಿಚಾರಗಳನ್ನೂ ನಾವು ಕಾಣಬಹುದು.

ಮುಖ್ಯವಾಗಿ ತೋರಣಗಳು, ಪಾಕೀಟು, ನೀರಿನ ಬಟ್ಟಲು, ಹಡಗು, ಗಾಳಿಚಕ್ರ, ಬಾಂಕ್, ರಾಷ್ಟ್ರಧ್ವಜ, ಹಾವು, ಬೀಸಣಿಗೆ, ಕರಡಿಗಳು ಮೊದಲಾದ ಸಾಮಗ್ರಿಗಳನ್ನು ಮಾಡುವುದು ಹೇಗೆ ಎಂಬುದನ್ನು ಬಹು ಸುಲಭವಾಗಿ ವಿವರಿಸಿದ್ದಾರೆ. ವಿದ್ಯಾರ್ಥಿಗಳಿಗೆ ಇದು ಪಠ್ಯಪುಸ್ತಕವಾಗಿದೆ, ಲೇಖಕರು ವಂದನಾರ್ಹರು.

—ಬ. ನ. ಸುಂ.

**ಪ್ರಭುಲಿಂಗಲೀಲೆ :** (ಗದ್ಯಾನುವಾದ) ಅನುವಾದಕರು : ಶ್ರೀ ಬಿ. ಸಿ. ಜವಳಿ, ಎಂ.ಎ., ಮತ್ತು ಶ್ರೀ ಮಲ್ಲಾಬಾದಿ ವೀರ ಭದ್ರಪ್ಪನವರು, ಧಾರವಾಡ. ಸೈಜು ಕ್ರೌನ್ ೧/೮, ಪುಟಗಳು ೩೨೨, ಬೆಲೆ ರೂ. ೪-೦೦.

ಕನ್ನಡದಲ್ಲಿ ಸುಪ್ರಸಿದ್ಧ ಕವಿಯಾದ ಚಾಮರಸನ ಪ್ರಭುಲಿಂಗಲೀಲೆಯು ಒಂದು ಗ್ರಂಥರತ್ನ. ತೆಲುಗಿನಲ್ಲಿ ಇಬ್ಬರು, ತಮಿಳು, ಮರಾಠಿ, ಸಂಸ್ಕೃತದಲ್ಲಿ ಮೂವರು ಕವಿಗಳು ಈ ಗ್ರಂಥವನ್ನು ಭಾಷಾಂತರಿಸಿ ಇದರ ಮಹತ್ವವನ್ನು ಹೆಚ್ಚಿಸಿದ್ದಾರೆ. ಕೈ॥ ಎಲ್. ಎಸ್. ಬಸವನಾಳರು ಈ ಗ್ರಂಥವನ್ನು ಸಮಗ್ರವಾಗಿಯೂ ದಿ॥ ಎಂ. ಆರ್. ಶ್ರೀನಿವಾಸಮೂರ್ತಿಗಳು ಸಂಗ್ರಹವಾಗಿಯೂ ಸಂಪಾದಿಸಿ ಪ್ರಕಟಿಸಿ ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ. ಹಲವಾರು ವರ್ಷಗಳ ಹಿಂದೆ ಕೈ॥ ಬಿಳೀ ಅಂಗಡಿ ವಕೀಲರು ಈ ಗ್ರಂಥದ ಗದ್ಯಾನುವಾದವನ್ನು ಪ್ರಕಟಿಸಿದುದೂ ಉಂಟು. ಹೀಗೆ ಬಹುಜನಪ್ರಿಯವಾದ ಪ್ರಭುಲಿಂಗಲೀಲೆ, ಕನ್ನಡದ ಅಭಿಮಾನಿಗಳಿಬ್ಬರ ಪ್ರಯತ್ನದ ಫಲವಾಗಿ ಸರಳ ಗದ್ಯಾನುವಾದದಲ್ಲಿ ಈಗ ಬೆಳಕು ಕಂಡಿದೆ.

ಇದು ಕೇವಲ ಗದ್ಯಾನುವಾದ ಮಾತ್ರವಲ್ಲ, ಹಂಪೆಯ ಹರೀಶ್ವರನ ಪ್ರಭುದೇವರ ರಗಳೆ, ಯಳಂದೂರು ಹರೀಶ್ವರ ಕವಿಯ ಪ್ರಭುದೇವರ ಪುರಾಣ, ಶೂನ್ಯ ಸಂಪಾದನೆ ಮೊದಲಾದ ಇತರ ಗ್ರಂಥಗಳಲ್ಲಿರುವ ಪ್ರಭುದೇವರ ಚರಿತ್ರೆಯನ್ನು ಇಲ್ಲಿ ತುಲನಾತ್ಮಕವಾಗಿ ವಿಮರ್ಶಿಸಿದೆ. ಚಾಮರಸನ ಕಾವ್ಯಶಕ್ತಿಯನ್ನು ವಿವಿಧ ಮುಖದಿಂದ ಇಲ್ಲಿ ವಿಮರ್ಶಿಸಲಾಗಿದೆ. ಭಾಷೆ ಸರಳವಾಗಿದೆ. ನಿರೂಪಣೆ ಹೃದಯಂಗಮವಾಗಿದೆ. ಕಾಗದ, ಮುದ್ರಣ, ರಕ್ಷಾಪತ್ರ ಲಕ್ಷಣವಾಗಿದೆ. ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತವಾದ ಗ್ರಂಥವಿದು.

**ಜಾನಪದ ಕಥನ ಗೀತೆಗಳು :** ಪ್ರಕಾಶಕರು : ಜಾನಪದ ಸಾಹಿತ್ಯ ಅಕ್ಯಾಡಮಿ, ಮೈಸೂರು. ಸೈಜು ಕ್ರೌನ್ ೧/೮, ಪುಟಗಳು ೩೭೫, ಬೆಲೆ ರೂ. ೫-೦೦.

ಕನ್ನಡ ನಾಡಿನಲ್ಲಿ ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆರತು ಹೋಗಿರುವ ಜಾನಪದ ಸಾಹಿತ್ಯವು ಕನ್ನಡಿಗರ ಸಂಸ್ಕೃತಿ ಭಂಡಾರ ಎನ್ನಬಹುದು. ಇದುವರೆಗೆ ಜನರ ನಾಲಗೆಯಲ್ಲಿ ಮಾತ್ರ ನಲಿದಾಡುತ್ತಿದ್ದ ಈ ಸಾಹಿತ್ಯವು ಈಗ ಹಲವರ ಪ್ರಯತ್ನದ ಫಲವಾಗಿ ಗ್ರಂಥ ರೂಪದಲ್ಲಿ ಬೆಳಕಿಗೆ ಬರುತ್ತಿರುವುದು ಸ್ವಾಗತಾರ್ಹವಾಗಿದೆ. ಮೈಸೂರಿನ ಉತ್ಸಾಹೀ ತರುಣರಾದ ಶ್ರೀ ಕಾ. ರಾ. ಕೃ. ಈ ದೆಸೆಯಲ್ಲಿ ಬಹಳ ಉತ್ತಮವಾದ ಕಾರ್ಯ ಮಾಡಿದ್ದಾರೆ. ಆದಿಚುಂಚನಗಿರಿ, ಮಲ್ಲಿಗೆ ನಗುತಾವೆ, ಪ್ರೇಮಗೀತೆಗಳು, ಜೇನು ಹನಿ, ನಾಡ ಹಾಡುಗಳು, ಜಾನಪದ ಗೀತೆಗಳು, ಆಯ್ದ ಮುತ್ತುಗಳು, ಅಂಬಿಗರ ಗಂಗ, ಕಥನಗೀತೆಗಳು ಮೊದಲಾದ ಗ್ರಂಥಗಳನ್ನು ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೆ ಮಿಗಿಲಾದ ಸೇವೆ ಸಲ್ಲಿಸಿದ್ದಾರೆ. ಇನ್ನೂ ಹಲವಾರು ಗ್ರಂಥಗಳನ್ನು ಪ್ರಕಟಿಸಲಿದ್ದಾರೆ. ಅವರ ಈ ಪ್ರಯತ್ನವು ಎಲ್ಲರ ಪ್ರೋತ್ಸಾಹಕ್ಕೂ ಅರ್ಹವಾಗಿದೆ.

ಪ್ರಕೃತ ಗ್ರಂಥದಲ್ಲಿ ಉತ್ತರದೇವಿ, ಚೆನ್ನಿಗರಾಯ, ನಾಗರ ಕನ್ಯೆ, ಮದುವಣ್ಣ, ಒಡ್ಡರ ಬೋಯಿ ಮೊದಲಾದ ೧೩ ಕಾಲ್ಪನಿಕ ಚಿತ್ರಗಳೂ ಕೃಷ್ಣ ಕೊರವಂಜಿ, ಅಂಬಿಗರ ಗಂಗ, ಗಿರಿಜಾ ಮಲ್ಲಯ್ಯ, ಬಂಜೆ ಹೊನ್ನಮ್ಮ ಇತ್ಯಾದಿ ೧೦ ಪೌರಾಣಿಕ ಚಿತ್ರಗಳೂ, ಪಿರಿಯಾಪಟ್ಟಣದ ಕಾಳಗ, ಕಥಾವಿಹಾರ ಅರ್ಥಸೂಚಿ, ಸಾಹಸದ ಕಥೆ ಎಂಬ ೪ ಚಾರಿತ್ರಿಕ ಚಿತ್ರಗಳೂ ಉದಿದ್ಬೊದೋ ಎಂಬ ಸ್ಥಳ ಚಿತ್ರವೂ ಇವೆ.

ಜಾನಪದ ಸಾಹಿತ್ಯವು ಅಡವಿಯ ಹೂವಿನಂತೆ ರಮಣೀಯವೂ ಜೇನು ಹನಿಯಂತೆ ಮಧುರತಮವೂ ಕಾಡು ಗಿಡಗಳಂತೆ ಸಹಜ ಸುಂದರವೂ ಎಂಬುದನ್ನು ನಾವಿಲ್ಲಿ ಕಾಣಬಹುದು. ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ಅಚ್ಚುಕಟ್ಟಾಗಿದೆ. ಸಾಹಿತಿಗಳಿಗೂ ಪುಸ್ತಕ ಭಂಡಾರಗಳಿಗೂ ಉಪಯುಕ್ತ ಗ್ರಂಥವಿದು.

**ಲಿಂಗತತ್ತ್ವ ದರ್ಪಣ :** ಬರೆದವರು : ಶ್ರೀ ಲಿಂಗಾನಂದರು, ಬಿ.ಎ. ಆನರ್ಸ್, ದಾವಣಗೆರೆ. ಸೈಜು ಕ್ರೌನ್ ೧/೮, ಪುಟಗಳು ೧೪೯, ಬೆಲೆ ರೂ. ೧-೫೦ ನ.ಪೈ.

ಇದು ವೀರಶೈವರು ಪೂಜಿಸುವ 'ಇಷ್ಟಲಿಂಗ' ಪೂಜೆಯನ್ನು ಕುರಿತು ನಿರೂಪಿಸುವ ಗ್ರಂಥ. ಇದರಲ್ಲಿ ಲಿಂಗ ಸಂಸ್ಕಾರ, ಲಿಂಗದ ವಿಕಾಸ, ಲಿಂಗದ ಸ್ವರೂಪ, ಕುರುಹಿನಿಂದ ಅರುಹು, ಇಷ್ಟಲಿಂಗದ ಅವಶ್ಯಕತೆ, ಲಿಂಗದ ಸಾಕಾರ ರೂಪ, ಲಿಂಗಪೂಜೆ-ಮೂರ್ತಿ ಪೂಜೆ, ಲಿಂಗಾಚಾರ, ಲಿಂಗ ದರ್ಪಣ, ಲಿಂಗ ದೊಲುಮೆ ಎಂಬ ಹತ್ತು ಪ್ರಕರಣಗಳಿವೆ. ದೇವರಿದ್ದಾನೆಂಬ ನಂಬಿಕೆ, ಏಕದೇವತೋಪಾಸನೆ, ಇಷ್ಟಲಿಂಗ ನಿಷ್ಠೆ ಇತ್ಯಾದಿ ವಿಷಯಗಳನ್ನು ಕುರಿತು ಇದರಲ್ಲಿ ಚೆನ್ನಾಗಿ ಹೇಳಲಾಗಿದೆ. ವಾಚನಾರ್ಹವಾದ ಗ್ರಂಥವಿದು.

ಇಷ್ಟಲಿಂಗ ಪೂಜೆಗೆ ನಿಕಟ ಸಂಬಂಧವುಳ್ಳ ಪ್ರಾಣಲಿಂಗ ಪೂಜೆ, ಭಾವಲಿಂಗ ಪೂಜೆಗಳ ವಿಷಯವನ್ನೂ ಈ ಗ್ರಂಥದಲ್ಲಿ ಹೇಳಿದ್ದರೆ ಇದರ ಉಪಯೋಗ ಹೆಚ್ಚುತ್ತಿತ್ತು. ವಾಚನಾರ್ಹ ಗ್ರಂಥವಿದು.

**ಸಂಗೀತ ಶಾಸ್ತ್ರಸಾರ :** ಬರೆದವರು : ಗಾನವಿದ್ಯಾ ವಿಶಾರದ ಶ್ರೀ ಎಲ್. ರಾಜಾರಾಯರು, ಬೆಂಗಳೂರು. ಸೈಜು ಕ್ರೌನ್ ೧/೮, ಪುಟಗಳು ೧೧೨, ಬೆಲೆ ರೂ. ೨-೦೦.

ಬೆಂಗಳೂರು ಶ್ರೀ ಶ್ರೀನಿವಾಸ ಸಂಗೀತ ಶಾಲೆಯವರಿಂದ ಪ್ರಕಟಗೊಂಡಿರುವ ಈ ಪುಸ್ತಕವನ್ನು ನಾವು ಹಾರ್ದಿಕವಾಗಿ ಸ್ವಾಗತಿಸುತ್ತೇವೆ. ಇದರಲ್ಲಿ ಲಲಿತ ಕಲೆಗಳು-ಸಂಗೀತ, ನಾದ-ಸ್ವರ, ರಾಗ, ತಾಳ, ಕೃತಿರೂಪಗಳು, ಗಾಯಕನ ಗುಣದೋಷಗಳು, ಶಾರೀರ-ಧ್ವನಿ ಲಕ್ಷಣ, ಸಂಗೀತ ವಾದ್ಯಗಳು, ವಾಗ್ಗೇಯಕಾರರು, ಸಂಗೀತದ ಚರಿತ್ರೆ, ಸ್ವರಲಯ ಸಂಯೋಜನೆ ಎಂಬಿಷ್ಟು ಪ್ರಕರಣಗಳಿವೆ. ಸಂಗ್ರಹವಾಗಿ ಸಂಗೀತಶಾಸ್ತ್ರ ವಿಷಯವನ್ನು ತಿಳಿಯಲಿಚ್ಛಿಸುವವರಿಗೆ ಇದು ಉಪಕಾರಿಯೆನಿಸಿದೆ. ವಾಗ್ಗೇಯಕಾರರೆನಿಸಿದ ಪುರಂದರ ದಾಸರು, ನಿಜಗುಣರು, ಕನಕದಾಸರು ಸರ್ಪಭೂಷಣರು, ರಾಮದಾಸರು, ಬಸವಣ್ಣನವರು, ತಾನ್‌ಸೇನ್, ಅಕ್ಕಮಹಾದೇವಿ, ಸೂರದಾಸ್,

ಮೀರಾಬಾಯಿ, ನಾರಾಯಣ ತೀರ್ಥ, ದೀಕ್ಷಿತರು, ತ್ಯಾಗರಾಜರು, ಶ್ಯಾಮಾ ಶಾಸ್ತ್ರಿಗಳು, ಸ್ವಾತಿತಿರುನಾಳ್, ಕ್ಷೇತ್ರಜ್ಞ, ಸದಾಶಿವರಾಯರು, ವೀಣೆ ಶೇಷಣ್ಣನವರು, ಬಿ. ಕೃಷ್ಣಪ್ಪನವರು, ವಿಷ್ಣು ದಿಗಂಬರ್ ಮೊದಲಾದವರ ಚರಿತ್ರೆಗಳಿವೆ.

ಸಂಗೀತಾಭ್ಯಾಸಿಗಳಿಗೆ ಉಪಕಾರಿಯೆನಿಸಿದೆ. ನಿಜಗುಣ ಶಿವಯೋಗಿ ಮೊದಲಾದವರ ಚರಿತ್ರೆ ನಿರೂಪಣೆಯಲ್ಲಿ ದೋಷಗಳಿವೆ. ಹಾಸ್ಯಿಮಾತ್ಯ (ಬಿನ್ನಹ) ಶೃತಿ (ಅನುಬಂಧ) ಇತ್ಯಾದಿ ಶಬ್ದದೋಷಗಳಿವೆ. ಇವನ್ನೆಲ್ಲಾ ಪುನರ್ಮುದ್ರಣದಲ್ಲಿ ಸರಿಪಡಿಸುವುದು ಅಗತ್ಯ. ನಿಜಗುಣ ಕಾಲ ೧೩ನೇ ಶತಮಾನ, ಕ್ರಿ. ಶ. ೧೫ನೇ ಶತಕವಲ್ಲ. ಇವರ ಗುರು ಯಾರೆಂಬುದು ತಿಳಿದಿಲ್ಲ. 'ಶಂಭುಲಿಂಗ' ಎಂಬುದು ಇವರ ಅಂಕಿತ ಮಾತ್ರ. ಇದನ್ನೆಲ್ಲಾ ಮುಂದಣ ಮುದ್ರಣದಲ್ಲಿ ಸರಿಪಡಿಸಲಿ ಎಂಬುದು ನಮ್ಮ ಆಶಯ.

ಮುಖ್ಯವಾಗಿ ಹರಿದಾಸರ ಕೃತಿಗಳು, ಶಿವಶರಣರ ಕೃತಿಗಳು, ಹರಿದಾಸರ ಕೃತಿಮಂಜರಿ ಮೊದಲಾದ ಗ್ರಂಥಗಳನ್ನು ಸಂಪಾದಿಸಿದ ಶ್ರೀ ರಾಯರು ಈ ಗ್ರಂಥವನ್ನು ಸಂಪಾದಿಸಿ ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ. ಉಪಯುಕ್ತ ಪುಸ್ತಕವಿದು.

—ಶೂಲಪಾಣಿ

**ಸುಹೃದಯು:** ಲೇಖಕರು: ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ, ಕನ್ನಡ ಪಂಡಿತ, ಮೈಸೂರು. ಪುಟಗಳು: ೩೯. ಬೆಲೆ: ನಮೂದಿಸಿಲ್ಲ. [Published in the year 1948]

ಇದು ಮಹಾಭಾರತದಿಂದಾರಿಸಿದ ಕಥಾಭಾಗ. ಕೃತಿಕಾರರೇ ಮುನ್ನುಡಿಯಲ್ಲಿ ಹೇಳಿರುವಂತೆ ಪುರಾಣಗಳಲ್ಲಿ ಅಲ್ಲಲ್ಲಿ ಕಂಡುಬರುವ ಭಾರತ ವಿಷಯಗಳಲ್ಲಿ ಈ ಕಥಾನಾಯಕನ ವಿಷಯವೂ ಒಂದು—ಎಂಬಂಶ ವಿದಿತವಾಗುತ್ತದೆ.

(i) ಭೀಮಪುತ್ರನಾದ ಹೈಡಿಂಬಿ (ಘಟೋತ್ಕಚ) ಶ್ರೀಕೃಷ್ಣನಾದೇಶಶೀತ್ಯಾ ಪ್ರಾಗ್ಜ್ಯೋತಿಷಪುರದ ಮುರಾಸುರನ ಮಗಳಾದ ಕಟಂಕಟೆಯನ್ನು ಜಯಿಸಿ ವಿವಾಹವಾಗುವುದು; (ii) ಅವರಿಗೆ ಜನಿಸಿದ 'ಬರ್ಬರೀಕ' ಅಥವ 'ಸುಹೃದಯು' ಎಂಬ ಮಗನು ಗುಪ್ತಕ್ಷೇತ್ರದಲ್ಲಿ ದೇವಿಯನ್ನಾರಾಧಿಸುತ್ತ 'ವಿಜಯ' ನೆಂಬ ತಪಸ್ವಿಯ ಹೋಮಕ್ಕೊದಗಿದ ವಿಘ್ನಗಳನ್ನೆಲ್ಲಾ ನಿವಾರಿಸಿ ಅವನ ಅನುಗ್ರಹಕ್ಕೆ ಪಾತ್ರನಾಗುವುದು; (iii) ವನವಾಸ ಮಾಡುತ್ತ ಪಾಂಡವರು ಗುಪ್ತ ಕ್ಷೇತ್ರಕ್ಕೆ ಬಂದಾಗ, ತಾತ ಮೊಮ್ಮಕ್ಕಳಿಗೆ (ಭೀಮ–ಸುಹೃದಯು) ಹೋರಾಟ ನಡೆದು ಕಡೆಗೆ ನಿಜಾಂಶ ವ್ಯಕ್ತವಾಗಿ ಪರಸ್ಪರ ಆನಂದ ತುಂದಿಲರಾಗುವುದು; (iv) ಅಂಬಿಕಾಧ್ಯಾನದ ಬಗ್ಗೆ ಕೋಪಗೊಂಡ ಭೀಮಸೇನನ ಪಶ್ಚಾತ್ತಾಪ; (v) ಸುಹೃದಯನ ಮರಣ ಹಾಗೂ ಆತನ ಶಿರಸ್ಸಿಗೆ ಅಮೃತಸೇಚನೆಯಿಂದ ಅಮರತ್ವ ಪ್ರಾಪ್ತಿ; (vi) ಸುಹೃದಯನು ಹಿಂದಣ ಜನ್ಮದಲ್ಲಿ ಸೂರ್ಯವರ್ಚನೆಂಬ ಯಕ್ಷರಾಜನಾಗಿದ್ದ ವೃತ್ತಾಂತ ಮತ್ತು ಭೀಮಗರ್ವಭಂಗ—ಈ ವಿಷಯಗಳ ವಿವೇಚನೆ ಕಥಾರೂಪದಲ್ಲಿ ಚೆನ್ನಾಗಿಯೇ ನಡೆದಿದೆ.

ಇಂತಹ ಪ್ರಯತ್ನದಿಂದ ಮಹಾಕಾವ್ಯಗಳಲ್ಲಿ ಗೋಚರವಾಗದೆ, ಪುರಾಣಗಳಲ್ಲಿ ಅಡಕವಾಗಿರುವ ಒಳ್ಳೊಳ್ಳೆಯ ವಿಷಯಗಳು ದೃಗ್ಗೋಚರವಾಗುವುದರಿಂದ ಈ ದಿಸೆಯಲ್ಲಿ ಈಗಿನ ಲೇಖಕರೂ ಪ್ರಯತ್ನಿಸುವುದೊಳಿತು. ಅಂತೂ ಪಂಡಿತರ ಈ ಕಾರ್ಯ ಸ್ತುತ್ಯ.

**ಶ್ರೀ ಚರಲಿಂಗಸ್ವಾಮಿಗಳವರ ನಾಮಾವಳಿಯು:** ಲೇಖಕರು: (ಪುರಾತನರ ಕಂದ) ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ; ಪ್ರಕಾಶಕರು: ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ ಬಿ.ಎ., ಎಲ್‌ಎಲ್.ಬಿ., ಅಡ್ವೋಕೇಟರು ಮತ್ತು ವಿರೂಪಾಕ್ಷಪ್ಪ ಮಹಾರುದ್ರಪ್ಪ ಮಿರ್ಜಿ, ಬಿ.ಎ.; ಪುಟ: ೧೦.

ತಮ್ಮ ಕಾವ್ಯನಾಮವನ್ನು ಅನ್ವರ್ಥವಾಗಿಸಿಕೊಂಡಿದ್ದಾರೆ. ಶ್ರೀಮಾನ್ ಮಿರ್ಜಿಯವರು— ಈಗಾಗಲೇ ಮೂವರು ಮಹಾಸ್ವಾಮಿಗಳವರ ನಾಮಾವಳಿಗಳನ್ನು ವಿರಚಿಸಿ.

ಈ ಕಿರುಹೊತ್ತಗೆಯನ್ನು 'ಅಭಿನವ ವಿವೇಕಾನಂದ' ರೆಂದು ಖ್ಯಾತರಾಗಿರುವ ಶ್ರೀ ಸಿದ್ದಗಂಗಾ ಮಠಾಧ್ಯಕ್ಷರಾದ ಗುರುದೇವ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀ ಶಿವಕುಮಾರಸ್ವಾಮಿಗಳವರ ದಿವ್ಯ ಸನ್ನಿಧಾನಂಗಳಲ್ಲಿ ಸಮರ್ಪಿಸಿರುವುದಂತೂ ಅರಿವು ಕರಿಗೊಂಡ ಮಹಾನುಭಾವರು ಎಸಗಬೇಕಾದ ಕರ್ತವ್ಯವೇ ಸೈ.

ಪ್ರಸ್ತುತ ನಾಮಾವಳಿಯ ಅಧಿನಾಯಕರಾದ ಶ್ರೀ ಚರಲಿಂಗ ಸ್ವಾಮಿಗಳವರ ಪೂರ್ವಪರಂಪರೆಯನ್ನು ಸೇರಿಸಿರುವುದು ಪರಿಚಯಾತ್ಮಕ ಲೇಖನದಂತಿದ್ದು, ಕೃತಿಯ ಶೋಭೆಯನ್ನು ನಿಜಕ್ಕೂ ಹೆಚ್ಚಿಸಿದೆ.

೧೦೮ ನಾಮಾವಳಿಯಲ್ಲಿಯೂ ಬಹುಮಟ್ಟಿಗೆ ಮಹಾಸ್ವಾಮಿಗಳವರ ವಿಷಯಾಂಬುಧಿಯಲ್ಲಿ ಮುಳುಗಬಾರದೆಂದು ಎಚ್ಚರಿಸುವ ಆಶೀರ್ವಚನ ರೂಪವೇ ಹೆಚ್ಚಾಗಿರುವುದು ಪ್ರಗತಿಪರ ದ್ಯೋತಕವೆನಿಸಿದೆ. ಒಟ್ಟಾರೆ 'ಪುರಾತನರ ಕಂದ' ನ ಬಳುವಳಿ ಓದುಗರನ್ನು ಪುರಾತನರ ಶಿವಾನುಭವವನ್ನು ಚೆನ್ನಾಗಿ ಅರಿಯಬೇಕೆಂದಾದರೂ ಪ್ರಚೋದಿಸುವುದರಲ್ಲಿ ಸಂಶಯವಿಲ್ಲ.

**ಶಶಿಕಲಾವಿದರು:** ಚಾಮರಾಜಪೇಟೆ, ಬೆಂಗಳೂರು-೧೮. (ಪ್ರಕಾಶಿಕೆ) ಜನವರಿ ೧೯೬೩.

ಈ ಸಂಸ್ಥೆಯ ಆರನೆಯ ವಾರ್ಷಿಕೋತ್ಸವ ಸಂದರ್ಭದಲ್ಲಿ ಅಖಿಲ ಕರ್ನಾಟಕ ನಾಟಕ ಸ್ಪರ್ಧೆ ಮತ್ತು ಹಿರಿಯ ಕಲಾವಿದರ ಸನ್ಮಾನ ನಡೆಸಿದಾಗ—ಹೊರಡಿಸಿದ ಪ್ರಕಾಶಿಕೆಯಿದು.

ಇದರಲ್ಲಿ ಸಂಘದ ವಿವಿಧ ಚಟುವಟಿಕೆಗಳು ಮತ್ತವುಗಳ ಭಾವಚಿತ್ರಗಳೂ, ವಿದ್ವಾಂಸರ ಕೆಲ ಲೇಖನಗಳೂ ಪ್ರಕಟವಾಗಿವೆ. ಆ ಪೈಕಿ ಬೆಳ್ಳಾವೆ ನರಹರಿಶಾಸ್ತ್ರಿಗಳು (ಆ.ನ.ಕೃ.) ನಟಶ್ರೇಷ್ಠ ಎಂ. ಜಿ. ಮರಿರಾಯರು (ಎಂ. ಎಸ್. ಭಾರದ್ವಾಜ್) ಮುಂತಾದುವು ಉತ್ತಮ ಲೇಖನಗಳು. ಜಾಹಿರಾತುಗಳ ಪ್ರಕಟಣೆಯಿಲ್ಲದಿದ್ದ ಪಕ್ಷದಲ್ಲಿ ಇದೊಂದು ಕಾಯ್ದಿಟ್ಟುಕೊಳ್ಳಬೇಕಾದ ಕೃತಿಯೇ ಸರಿ.

—ಪಂಡಿತ ಕೆ. ಶಿವಲಿಂಗಯ್ಯ

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

## ಸಾಹಿತ್ಯ ಪರೀಕ್ಷೆಗಳ ಪಠ್ಯಪುಸ್ತಕಗಳ ಪಟ್ಟಿ, ೧೯೬೩

### ಕಾವ ಪರೀಕ್ಷೆ ೧೯೬೩

**I ಪದ್ಯ ಮತ್ತು ವ್ಯಾಕರಣ (ಪತ್ರಿಕೆ I)**

**ಪದ್ಯ** : ಕನ್ನಡದ ಬಾವುಟ ಬೆಲೆ : ೨-೦೦
(ಪರಿಷತ್ತಿನ ಪ್ರಕಟಣೆ)

೧. ಎರಡನೆಯ ತೆನೆ :

(i) ಕನ್ನಡಿಗರುಸಿರು – ಕಣ್ಣು
೧) ಪಂಪ – ಜಿನಸ್ತುತಿ
೨) ನಾಗಚಂದ್ರ – ಜಿನಸ್ತುತಿ
೩) ಬೊಪ್ಪಣ – ಗೊಮ್ಮಟ ಜಿನಸ್ತುತಿ
೪) ರನ್ನ – ವೈರಾಗ್ಯ

(ii) ದಾಸರ ಪದಗಳು : ೬ ರಿಂದ ೧೦ ಪೂರ್ತಿ

೨. ಮೂರನೆಯ ತೆನೆ ಪೂರ್ತಿ :

೩. ಗಮಕ ಕಾವ್ಯಮಂಜರಿ : ೧ ರಿಂದ ೪೦ ಪುಟಗಳು ಮಾತ್ರ. (ಪರಿಷತ್ತಿನ ಪ್ರಕಟಣೆ)
ಬೆಲೆ : ೧-೦೦

**ವ್ಯಾಕರಣ**

(ಆಯಾ ಪ್ರಾಂತಗಳ ಪ್ರೌಢಶಾಲೆಗಳಿಗೆ ನಿಯಮಿತವಾಗಿರುವ ವ್ಯಾಕರಣ)

**II ಗದ್ಯ ಮತ್ತು ಪ್ರಬಂಧ ರಚನೆ (ಪತ್ರಿಕೆ II)**

೧. ಚಿಂಬಿ ಹಿಡಿದ ಮಿಾನು (ಭಾರತೀಸುತ)
ಪ್ರಕಟನಕಾರರು : ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ ಮೈಸೂರು.
ಬೆಲೆ :

೨. ಆಧುನಿಕ ಗದ್ಯ ಸಾಹಿತ್ಯ : ಭಾಗ I
(ಪರಿಷತ್ತಿನ ಪ್ರಕಟಣೆ) ಬೆಲೆ : ೨-೫೦

೩. ಕಲ್ಯಾಣೇಶ್ವರ,
(ಬಿ. ಪುಟ್ಟಸ್ವಾಮಯ್ಯ)
ಪ್ರಕಟನಕಾರರು : ಶಾರದಾ ಪ್ರಕಟನಾಲಯ, ಅರಳೇಪೇಟೆ, ಬೆಂಗಳೂರು-೨. ಬೆಲೆ : ೩-೫೦

**III ಚರಿತ್ರೆ ಮತ್ತು ಲಲಿತಕಲೆ (ಪತ್ರಿಕೆ III)**

೧. ಕರ್ಣಾಟಕ ವೀರರತ್ನಗಳು, ಬೆಲೆ :
(ಆಲೂರು ವೆಂಕಟರಾಯರು, ಧಾರವಾಡ.)

೨. ಕನ್ನಡನಾಡಿನ ಚರಿತ್ರೆ ಭಾಗ III "ಕಲೆ"
(ಪರಿಷತ್ತಿನ ಪ್ರಕಟಣೆ) ಬೆಲೆ : ೧-೭೫

---

### ಜಾಣ ಪರೀಕ್ಷೆ ೧೯೬೩

**I ಪದ್ಯ ಮತ್ತು ನಾಟಕ (ಪತ್ರಿಕೆ I)**

೧. ಕಾವ್ಯ ಸೌರಭ ಬೆಲೆ : ೨-೦೦
(ಪರಿಷತ್ತಿನ ಪ್ರಕಟಣೆ)

೨. ಕನ್ನಡದ ಬಾವುಟ :
(i) ಮೂರನೆಯ ತೆನೆ ಪೂರ್ತಿ
(ii) ನಾಲ್ಕನೆಯ ತೆನೆ ೧೪೦ ರಿಂದ ೧೭೬ ಪುಟಗಳು ಬೆಲೆ : ೨-೦೦
(ಪರಿಷತ್ತಿನ ಪ್ರಕಟಣೆ)

೩. ಚಿಕುಪಾಧ್ಯಾಯ ವಿರಚಿತ ಶತಕ ಸಾಂಗತ್ಯಗಳು :
(i) ನೀತಿ ಶತಕ ಸಾಂಗತ್ಯ ೪೧ ರಿಂದ ೫೮ ಪುಟಗಳು.
ಪ್ರಕಟನಕಾರರು : ಪ್ರಾಚ್ಯ ಕಾವ್ಯ ಪ್ರಕಾಶನ, ೧೯೧/೧, ೩ನೇ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮.
ಬೆಲೆ : ೧-೦೦

೪. ಯಯಾತಿ – ಕಾರ್ನಾಡ್ ಸದಾಶಿವರಾವ್.
ಪ್ರಕಟನಕಾರರು : ಮನೋಹರ ಗ್ರಂಥಮಾಲ, ಧಾರವಾಡ. ಬೆಲೆ :

೫. ಮೂರು ಸ್ಪರ್ಧಾ ನಾಟಕಗಳು. ಬೆಲೆ : ೨-೭೫
(ಪರಿಷತ್ತಿನ ಪ್ರಕಟಣೆ)

## II ಗದ್ಯ ಮತ್ತು ಪ್ರಬಂಧ (ಪತ್ರಿಕೆ II)

೧. ಕನ್ನಡ ರತ್ನತ್ರಯ, ಬೆಲೆ: ೧–೭೫
ಎನ್. ಅನಂತರಂಗಾಚಾರ್
ಪ್ರಕಾಶಕರು: ಎನ್. ಎಸ್. ವಾಸನ್ ಮತ್ತು ಕಂಪೆನಿ, ಬಳೇಪೇಟೆ, ಬೆಂಗಳೂರು–೨.

೨. ಹೊಸಗನ್ನಡ ಸಾಹಿತ್ಯ, ಮತ್ತಿತರ ಲೇಖನಗಳು, ಬೆಲೆ: ೨–೫೫
(ಎಂ. ವಿ. ಸೀತಾರಾಮಯ್ಯ, ಎಂ.ಎ.),
ಪ್ರಕಟನಕಾರರು: ರಾಘವ ಪ್ರಕಾಶನ, ೯, III ಕ್ರಾಸ್, ಗವೀಪುರಂ, ಬೆಂಗಳೂರು–೧೯.
ಬೆಲೆ: ೨–೦೦

೩. ಬಿದನೂರು ಪ್ರಭು ಶಿವಪ್ಪನಾಯಕ,
(ಭಾಗ ೧ ಮತ್ತು ೨ ಸಹಿತ) ಬೆಲೆ: ೨-೦೦
ಪ್ರಕಟನಕಾರರು: ಶರಣ ಸಾಹಿತ್ಯ ಕಾರ್ಯಾಲಯ, ೧೮೦, ರಂಗಸ್ವಾಮಿಗುಡಿ ಬೀದಿ, ಬೆಂಗಳೂರು–೨

೪. ಕೂಗುತಿವೆ ಕಲ್ಲು, ಬೆಲೆ: ೧–೭೫
(ದೇವೇಂದ್ರಕುಮಾರ್ ಹಕಾರಿ)
ಪ್ರಕಟನಕಾರರು: ಕರ್ಣಾಟಕ ಹಿಂದೀ ಪ್ರಚಾರ ಸಭಾ, ಧಾರವಾಡ.

೫. ಜೇಮ್ಸ್ ಎಬ್ರಹಾಂ ಗಾರ್‌ಫೀಲ್ಡ್‌ನ ಚರಿತ್ರೆ,
ಬೆಲೆ: ೧–೦೦
(ಪರಿಷತ್ತಿನ ಪ್ರಕಟಣೆ)

## III ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರ (ಪತ್ರಿಕೆ III)

೧. ವ್ಯಾಕರಣ: ಹಳೆಗನ್ನಡ ವ್ಯಾಕರಣ.

೨. ಛಂದಸ್ಸು: ಗಣಗಳು, ಪ್ರಾಸಗಳು, ವೃತ್ತಗಳು, ಶಾರ್ದೂಲ, ಮತ್ತೇಭ, ಉತ್ಪಲ, ಚಂಪಕ, ಸ್ರಗ್ಧರೆ, ಮಹಾಸ್ರಗ್ಧರೆ, ಮಾಲಿನಿ ಕಂದ, ಆರು ಷಟ್ಪದಿಗಳು, ರಗಳೆಗಳು, ಸಾಂಗತ್ಯ, ದ್ವಿಪದಿ, ತ್ರಿಪದಿ, ಸೀಸಪದ್ಯ, ಆಧುನಿಕ ಭಾವಗೀತೆಗಳಲ್ಲಿ ಬರುವ ಛಂದಸ್ಸು.

೩. ಅಲಂಕಾರ: ಶಬ್ದಾಲಂಕಾರ, ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕ, ಉತ್ಪ್ರೇಕ್ಷೆ ಅತಿಶಯೋಕ್ತಿ, ಅರ್ಥಾಂತರನ್ಯಾಸ, ಶ್ಲೇಷೆ, ವಿರೋಧಾಭಾಸ, ರಸ, ಕವಿ ಸಮಯ, ಕಾವ್ಯ ಸ್ವರೂಪ, ಕಾವ್ಯದ ಗುಣಗಳು ಮತ್ತು ದೋಷಗಳು.

—ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ “ಕನ್ನಡ ಕೈಪಿಡಿ”ಯಲ್ಲಿ ಬರುವ ಭಾಗಗಳನ್ನು ಬೋಧಿಸಬೇಕು.
ಬೆಲೆ: ೨–೫೦

## IV ಸಾಹಿತ್ಯ ಚರಿತ್ರೆ ಮತ್ತು ಸಂಸ್ಕೃತಿ (ಪತ್ರಿಕೆ IV)

೧. ಕನ್ನಡನಾಡಿನ ಚರಿತ್ರೆ ಭಾಗ II,
ಬೆಲೆ: ೨–೦೦
(ಪರಿಷತ್ತಿನ ಪ್ರಕಟಣೆ)

೨. ಕರ್ಣಾಟಕ ಜನತೆಯ ಸಂಸ್ಕೃತಿ, ಬೆಲೆ:
(ಶ್ರೀನಿವಾಸ)
ಪ್ರಕಟನಕಾರರು: ಜೀವನ ಕಾರ್ಯಾಲಯ, ೪೪–೪೫, ಗವೀಪುರದ ಹರವು, ಬೆಂಗಳೂರು–೪

ಜೊತೆಗೆ ಈ ಕೆಳಗೆ ಕಾಣಿಸಿರುವ ಕವಿಗಳ ಪರಿಚಯ ಹೊಂದಿರಬೇಕು:

೧. ಪಂಪ, ರನ್ನ, ಒಂದನೇ ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ಜನ್ನ, ಆಂಡಯ್ಯ.

೨. ಬಸವಣ್ಣ, ಮಹಾದೇವಿ ಅಕ್ಕ, ಹರಿಹರ, ರಾಘವಾಂಕ, ನಿಜಗುಣ ಶಿವಯೋಗಿ, ಚಾಮರಸ, ವಿರೂಪಾಕ್ಷ, ಗುಬ್ಬಿ ಮಲ್ಲಣಾರ್ಯ, ಷಡಕ್ಷರಿ, ಸರ್ವಜ್ಞ, ಬಸವಪ್ಪಶಾಸ್ತ್ರಿ.

೩. ಕಂತಿ, ದುರ್ಗಸಿಂಹ, ರುದ್ರಭಟ್ಟ, ನಾರಣಪ್ಪ, ಕನಕದಾಸರು, ಪುರಂದರದಾಸರು, ಜಗನ್ನಾಥದಾಸರು, ಚಿಕುಪಾಧ್ಯಾಯ, ಲಕ್ಷ್ಮೀಶ, ಹೊನ್ನಮ್ಮ.

೪. ನೃಪತುಂಗ, ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ, ಸಾಳ್ವ, ತಿರುಮಲಾರ್ಯ.

[ಉಪಾಧ್ಯಾಯರು ಈ ಭಾಗಗಳನ್ನು ಹೇಳಿಕೊಡಬೇಕಾದಾಗ ಡಾ॥ ರಂ. ಶ್ರೀ. ಮುಗಳಿ ಅವರ “ಕನ್ನಡ ಸಾಹಿತ್ಯ ಚರಿತ್ರೆ”, ಶ್ರೀ ಆರ್. ನರಸಿಂಹಾಚಾರ್ಯರ “ಕರ್ಣಾಟಕ ಕವಿಚರಿತೆ”-ಕನ್ನಡ ಕೈಪಿಡಿ ಭಾಗ II, ಪ್ರೊ॥ ಧಾರವಾಡಕರ್ ಅವರ “ಕನ್ನಡ ಭಾಷಾಶಾಸ್ತ್ರ”, ಮತ್ತು ಡಾ॥ ಕರ್ಕಿಯವರ “ಛಂದೋ ವಿಕಾಸ” ಇವುಗಳನ್ನೂ ಆಧಾರವಾಗಿ ಅವಲೋಕನ ಮಾಡಬೇಕು.]




# ಸಾಹಿತ್ಯ ಪರೀಕ್ಷೆಗಳು - ೧೯೬೩

## ತಿಳುವಳಿಕೆ

೧೯೬೩ನೇ ಸಾಲಿನ ಸಾಹಿತ್ಯ ಪರೀಕ್ಷೆಗಳು ೧೯೬೩ನೇ ಜನವರಿ ಕೊನೆಯ ವಾರದಲ್ಲಿ ನಡೆಯುತ್ತವೆ.

ವ್ಯಾಸಂಗ ಕೇಂದ್ರಗಳಿಂದಲೂ ಮತ್ತು ಸ್ವಂತ ವ್ಯಾಸಂಗಿಗಳಿಂದಲೂ ಅಪೇಕ್ಷಾ ಪತ್ರಗಳನ್ನು ೧೯೬೨ನೇ ಸೆಪ್ಟೆಂಬರ್ ಮಾಹೆ ೩೦ನೇ ತಾರೀಕಿನವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸುವುದಿಲ್ಲ. ವಿದ್ಯಾರ್ಥಿಗಳು ತಾವು ವ್ಯಾಸಂಗ ಮಾಡಿದ ಕೇಂದ್ರಗಳಲ್ಲಿಯೇ ಪರೀಕ್ಷೆಗೆ ಕುಳಿತುಕೊಳ್ಳಬೇಕು. ಹೀಗೆ ವ್ಯಾಸಂಗ ಮಾಡಿದ ಕೇಂದ್ರವು ಪರೀಕ್ಷಾ ಕೇಂದ್ರವಾಗದಿದ್ದರೆ, ತಮಗೆ ಅತ್ಯಂತ ಸಮೀಪವಾಗಿರುವ ಪರೀಕ್ಷಾ ಕೇಂದ್ರವನ್ನು ಚುನಾಯಿಸಿಕೊಳ್ಳಬಹುದು. **ಒಂದು ಸಲ ಚುನಾಯಿಸಿಕೊಂಡ ಕೇಂದ್ರವನ್ನು ಯಾವ ಕಾರಣದಿಂದಲೂ ಬದಲಾಯಿಸಲಾಗುವುದಿಲ್ಲ.**

ಪರಿಷತ್ತಿನಿಂದ ಮುಂಚಿತವಾಗಿ ಅನುಮತಿ ಪಡೆದ ವ್ಯಾಸಂಗ ಕೇಂದ್ರ ವ್ಯವಸ್ಥಾಪಕರು ತಮ್ಮ ಕೇಂದ್ರದ ಅಪೇಕ್ಷಾ ಪತ್ರಗಳೆಲ್ಲವನ್ನೂ **ಒಟ್ಟುಗೂಡಿಸಿ** ಪರೀಕ್ಷಾರ್ಥಿಗಳ ಎರಡು ಪಟ್ಟಿಗಳೊಡನೆ, ಕೇಂದ್ರದ ಪೂರ್ಣ ಪರೀಕ್ಷಾ ಶುಲ್ಕದೊಂದಿಗೆ **ಸೆಪ್ಟೆಂಬರ್ ೩೦ನೇ ತಾರೀಖಿನೊಳಗಾಗಿ ಪರಿಷತ್ತಿಗೆ ತಲುಪುವಂತೆ ಕಳುಹಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಬೇಕಾದರೆ ಬ್ಯಾಂಕ್ ಡ್ರಾಫ್ಟ್ ಮೂಲಕ ಕಳುಹಿಸಬಹುದು.**

ಸ್ವಂತ ವ್ಯಾಸಂಗಿಗಳು ತಮ್ಮ ಅಪೇಕ್ಷಾ ಪತ್ರಗಳೊಂದಿಗೆ ಪರೀಕ್ಷಾ ಶುಲ್ಕವನ್ನು 'ಎಂ. ಒ.' ಮಾಡಿದ ರಸೀತಿಯನ್ನು ತಪ್ಪದೆ ಕಳುಹಿಸಬೇಕು. ಹೀಗೆ 'ಎಂ. ಒ.' ರಸೀದಿಗಳಿಲ್ಲದ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸುವುದಿಲ್ಲ. 'ಎಂ. ಒ' ಕೂಪನ್ನುಗಳಲ್ಲಿ ವಿದ್ಯಾರ್ಥಿಗಳು ತಮ್ಮ ಪೂರ್ಣ ವಿಳಾಸವನ್ನು ತಪ್ಪದೆ ಶುದ್ಧವಾಗಿ ಬರೆಯಬೇಕು. ಹಾಗೆ ಬರೆಯದಿದ್ದಲ್ಲಿ ಅವರ ಅಪೇಕ್ಷಾ ಪತ್ರಗಳನ್ನು ರಿಜಿಸ್ಟರ್ ಮಾಡಿಕೊಳ್ಳುವುದಿಲ್ಲ. ಅಪೇಕ್ಷಾ ಪತ್ರಗಳನ್ನು Registered Post ಮೂಲಕ ರವಾನಿಸಬೇಕು. **T.M.O.ಗಳನ್ನು ಸ್ವೀಕರಿಸುವುದಿಲ್ಲ.**

ಅಪೇಕ್ಷಾ ಪತ್ರಗಳನ್ನು ತುಂಬುವಾಗ ವಿದ್ಯಾರ್ಥಿಗಳು ತಮ್ಮ ಪೂರ್ಣ ಹೆಸರು, ತಂದೆ ಹೆಸರು ಮತ್ತು ವಿಳಾಸವನ್ನು ಸ್ಪಷ್ಟವಾದ ಅಕ್ಷರಗಳಲ್ಲಿ ಬರೆಯಬೇಕು.

**'ಕಾವ' ಪರೀಕ್ಷಾ ಶುಲ್ಕ ರೂ. ೫-೦೦**

**'ಜಾಣ' ,, ರೂ. ೮-೦೦**

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು-೧೮

**ಅನ್ನದಾನಯ್ಯ ಪುರಾಣಿಕ**
**ಕೆ. ಎಂ. ಕೃಷ್ಣರಾಯರು**
ಗೌರವ ಕಾರ್ಯದರ್ಶಿಗಳು

# ಸುಬ್ಬಯ್ಯನಾಯ್ಡುರ ನಿಧನಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಸಂತಾಪ

ಕನ್ನಡ ರಂಗಭೂಮಿಗೂ ನಾಟಕ ಸಾಹಿತ್ಯಕ್ಕೂ ಮಿಗಿಲಾದ ಸೇವೆಯನ್ನು ಸಲ್ಲಿಸಿದ ಹಾಗೂ ಕೇಂದ್ರ ಸಂಗೀತ ನಾಟಕ ಅಕಾಡೆಮಿಯಿಂದ ಸನ್ಮಾನಿತರಾದ ಶ್ರೀ ಸುಬ್ಬಯ್ಯ ನಾಯ್ಡು ಅವರ ನಿಧನದ ಬಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಜುಲೈ ೨೮ ರ ಸಂಜೆ ಸಂತಾಪ ಸೂಚಕ ಸಭೆ ನಡೆಯಿತು.

ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ಲೋಕಸಭೆಯ ಸದಸ್ಯರಾದ ಶ್ರೀ ಕೆ. ಹನುಮಂತಯ್ಯನವರು, ಶ್ರೀ ನಾಯ್ಡು ಅವರ ಆಪ್ತ ಗೆಳೆಯರಾಗಿದ್ದ ಶ್ರೀ ನಾಗೇಂದ್ರರಾಯರು ನೀಡಿದ ಭಾವಚಿತ್ರದ ಅನಾವರಣವನ್ನು ನಡೆಸಿದರು.

ಪರಿಷತ್ತಿನ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಶ್ರೀ ಅನ್ನದಾನಯ್ಯ ಪುರಾಣಿಕ ಅವರು ಸ್ವಾಗತ ಭಾಷಣ ಮಾಡಿದರು.

## ಭಾವಚಿತ್ರ ಅನಾವರಣ

ಶ್ರೀ ಕೆ. ಹನುಮಂತಯ್ಯನವರು ಮಾತನಾಡಿ, 'ಕನ್ನಡ ನಾಡಿನ ಹಿರಿಮೆಯನ್ನು ಬೆಳಗಿಸಿದವರಲ್ಲಿ ಹಲವಾರು ಮಂದಿ ಇದ್ದಾರೆ. ಅಂತಹವರಲ್ಲಿ ಶ್ರೀ ಸುಬ್ಬಯ್ಯ ನಾಯ್ಡು ಅವರೂ



ದಿ॥ ಸುಬ್ಬಯ್ಯನಾಯ್ಡು

ಒಬ್ಬರು' ಎಂದರು. ಮನಸ್ಸಿಗೆ ಹಿಡಿಯುವ ಹಾಗೆ ಪಾತ್ರವನ್ನು ವಹಿಸುವವರು ಬಹಳ ಅಪರೂಪ, ಅಂತಹವರಲ್ಲಿ ಶ್ರೀ ನಾಯ್ಡು ಅವರು ಒಬ್ಬರೆಂದು ತಿಳಿಸಿದರು.

ಅತ್ಯುತ್ತಮ ಕಲಾವಿದರ ಸಾವಿನಿಂದ ಅವರುಗಳು ತಮ್ಮ ಕಲಾಶಕ್ತಿ, ನಟನಾ ಸಾಮರ್ಥ್ಯದಿಂದ ನಿರ್ವಹಿಸುತ್ತಿದ್ದ ಪಾತ್ರಗಳನ್ನು ಅಭಿನಯಿಸಿ ತಕ್ಕ ವ್ಯಕ್ತಿಗಳು ಇಲ್ಲದೆ ಅವರುಗಳು ಆಡುತ್ತಿದ್ದ ಅನೇಕ ನಾಟಕಗಳನ್ನು ನಿಲ್ಲಿಸಲಾಗುತ್ತಿದೆ ಎಂದು ಶ್ರೀ ಜಿ. ಎಚ್. ವೀರಣ್ಣನವರು ತಿಳಿಸಿ, ಶ್ರೀ ನಾಯ್ಡು ಅವರ ಗುಣಗಾನ ಮಾಡಿದರು. ನಾಟಕರಂಗದಲ್ಲಿ ಶಿರೋಮಣಿ, ಕಳಸಪ್ರಾಯರಾಗಿದ್ದಂತಹ ವರದಾಚಾರ್ಯರು ಮತ್ತು ಇನ್ನೂ ಅನೇಕ ಕಲಾವಿದರ ಭಾವಚಿತ್ರಗಳನ್ನು ಪರಿಷತ್ತಿನಲ್ಲಿ ಅನಾವರಣ ಮಾಡಬೇಕೆಂದರು.

ಶ್ರೀ ನಾಯ್ಡು ಅವರ ಪರಿಚಯವನ್ನು ಇತ್ತೀಚಿಗೆ ಪಡೆದ ಶ್ರೀಮತಿ ವಿಮಲಾ ರಂಗಾಚಾರ್ ಅವರು, ಶ್ರೀ ಸುಬ್ಬಯ್ಯ ನಾಯ್ಡು ಅವರು ಚಿತ್ರ ಕ್ಷೇತ್ರದಲ್ಲಿಯೇ ಇದ್ದಿದ್ದರೆ ಅಪಾರ ಹಣವನ್ನು ಗಳಿಸಬಹುದಾಗಿತ್ತೆಂದೂ, ಆದರೆ ಅವರು ಆ ಕ್ಷೇತ್ರವನ್ನು ತ್ಯಾಗಮಾಡಿ, ರಂಗಭೂಮಿಯ ಅಭಿಮಾನ ಅವರನ್ನು ಅಲ್ಲಿಗೆ ಮತ್ತೆ ಸೆಳೆದಿದ್ದನ್ನು ನೋಡಿದರೆ ಅವರಿಗೆ ರಂಗಭೂಮಿಯ ಬಗ್ಗೆ ಇದ್ದ ಅಭಿಮಾನವನ್ನು ತೋರಿಸುತ್ತದೆಯೆಂದೂ ನುಡಿದರು.

ಸ್ಮಾರಕಗಳನ್ನು ಏರ್ಪಡಿಸುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ತಿಳಿಸಿದ ಶ್ರೀ ಅ. ನ. ಸುಬ್ಬರಾಯರು ಶ್ರೀ ನಾಯ್ಡು ಅವರ ಪುತ್ರ ಮುಂದೆ ಬರಲು ಸಹಾಯ ಮಾಡಿದರೆ ಅದಕ್ಕಿಂತ ಬೇರೆ ಸ್ಮಾರಕವಿಲ್ಲವೆಂದರು.

ದಿವಂಗತರು ನಾಟಕ ಕಲೆಗೆ ತನು ಮನ ಧನವನ್ನು ಅರ್ಪಿಸಿದ ದೊಡ್ಡ ವ್ಯಕ್ತಿಯಾಗಿದ್ದರೆಂದೂ ಕನ್ನಡ ದೇಶದಲ್ಲಿ ಆತ್ಮಾಭಿಮಾನವನ್ನು ಹೆಚ್ಚಿಸುವ ಹೊಸ ಪ್ರಭಾವ ಇಂದು ಸ್ಫೂರ್ತಿದಾಯಕ ರೂಪದಲ್ಲಿ ಹರಿಯುತ್ತಿದೆಯೆಂದೂ ಶ್ರೀ ಪಿ. ಆರ್. ರಾಮಯ್ಯನವರು ಹೇಳಿ ಕನ್ನಡ ನಾಟಕ ಕಲೆಗೆ ಜನರು ಪ್ರೋತ್ಸಾಹ ನೀಡಬೇಕೆಂದರು.

ಶ್ರೀಮತಿ ಬಿ. ಜಯಮ್ಮನವರು ಅಣ್ಣನ ನಿಧನದ ಬಗ್ಗೆ ಬಾಷ್ಪಾಂಜಲಿಯನ್ನು ಅರ್ಪಿಸಿದರು.

ಶ್ರೀ ಸುಬ್ಬಯ್ಯನಾಯ್ಡು ಅವರ ಹೆಸರು ಶಾಶ್ವತವಾಗಿ ಉಳಿಯಬೇಕಾದರೆ, ಅವರು ನಡೆಸುತ್ತಿದ್ದ ನಾಟಕ ಸಂಸ್ಥೆಯು ಯಶಸ್ವಿಯಾಗಿ ನಡೆಯುವಂತೆ ಮಾಡಬೇಕೆಂದು ಶ್ರೀ ಶಿವಮೂರ್ತಿಶಾಸ್ತ್ರಿ ಅವರು ತಿಳಿಸಿ ತಾವೇ ರಚಿಸಿದ ಕವನವನ್ನು ಓದಿದರು.

## ಸಂತಾಪ ಸೂಚಕ ನಿರ್ಣಯ

"ಕನ್ನಡ ನಾಡಿನ ಕಲಾ ಪ್ರಗತಿಗಾಗಿ ತಮ್ಮ ಜೀವಮಾನವನ್ನೆಲ್ಲಾ ಅರ್ಪಿಸಿ ಶ್ರಮಿಸಿದ ಶ್ರೀ ಸುಬ್ಬಯ್ಯನಾಯ್ಡು ಅವರ ನಿಧನದಿಂದ ಅಪಾರ ದುಗುಡವೆನಿಸಿದೆ. ಪರಮೇಶ್ವರನು ಮೃತರ ಆತ್ಮಕ್ಕೆ ಶಾಂತಿ ನೀಡಲಿ ಮತ್ತು ಅವರ ಬಂಧುವರ್ಗದವರಿಗೆ ಸಮಾಧಾನ ನೀಡಲಿ" ಎಂಬ ನಿರ್ಣಯವನ್ನು ಅಂಗೀಕರಿಸಿದ ಸಭೆಯು ಒಂದು ನಿಮಿಷ ಮೌನವನ್ನಾಚರಿಸಿ ದಿವಂಗತರಿಗೆ ಗೌರವವನ್ನು ಸಲ್ಲಿಸಿತು.

# ದಿ|| ಎಂ. ವಿ. ಸುಬ್ಬಯ್ಯನಾಯ್ಡು



೧

ನಾಡುನುಡಿಗಳ ಸೇವೆಗಾಗಿ ಜೀವನವಿತ್ತೆ ।
ನಾಯ್ಡು ನೀಂ ಧನ್ಯ ನೀ ಧಾರಿಣಿಯೊಳು ॥
ರಂಗಭೂಮಿಯ ಸೇವೆಗಾಗಿ ನೀನೊಪ್ಪಿಸಿದೆ ।
ಅಂಗವಂ ಕರ್ಮಯೋಗದ ಮಾರ್ಗದಿಂದೆ ॥

೨

ಕನ್ನಡದ ಚಿತ್ರಗಳ ನಿರ್ಮಾಪಕನು ನೀನು ।
ಉನ್ನತದ ರಂಗಭೂಮಿಯ ನಟನು ನೀನು ॥
ಸನ್ನುತನು ಸಂಗೀತ ಸಾಹಿತ್ಯವಿದ ನೀನು ।
ಮನ್ನಣೆಯ ದೇಶಭಕ್ತನು ಧನ್ಯ ನೀನು ॥

೩

ಸಾಹಿತ್ಯ ಸಾಮ್ರಾಜ್ಯ ಮಂಡಲಿಯ ಸ್ಥಾಪಕನು ।
ಭಾವೈಕ್ಯಕಾಗಿ ಶ್ರಮಿಸಿದ ಮಾನ್ಯ ನೀನು ॥
ಕೋವಿದರ ಸೇವೆಯನು ಮನಸಾರ ಮಾಡಿದನು ।
ಭೂವಿನುತ ತತ್ವಗಳ ಪಾಲಕನು ನೀನು ॥

೪

ನಶ್ವರದ ದೇಹವನು ತ್ಯಜಿಸಿ ನೀ ನಡೆದಿರುವೆ ।
ಶಾಶ್ವತದ ಭಗವಂತನೆಡೆಗೆ ನೀನಿಂದು ॥
ಪರಮಾತ್ಮನೀಯಲ್ಕೆ ನಿನ್ನಾತ್ಮನಿಗೆ ಶಾಂತಿ ।
ಧರಣಿಯೊಳು ಮೆರೆಯಲ್ಕೆ ನಿನ್ನಮಲಕೀರ್ತಿ ॥

೫

ಸತಿಯ ಸಹಗಮನದಿಂ ಮಿಗಿಲಾದ ಬೆಳ್ಳಿಸವ ।
ಕ್ಷಿತಿಯೊಳಗೆ ಪಡೆದೆಯೈ ಸುಕೃತಿ ನೀನು ॥
ಮತಿವಂತರೆಲ್ಲರೂ ನಿನ್ನ ಪೊಗಳುತ್ತಿಹರು ।
ಅತಿಶಯದ ಶರಣ ಜೀವನ ಪಡೆದೆಯೆಂದು ॥

—ಶೂಲಪಾಣಿ

## ಪರಿಷತ್ತಿನ ಸಕಲ ಸದಸ್ಯರ ಸಭೆ

ತಾ|| ೨೯-೭-೧೯೬೨ ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯರ ೪೬ನೆಯ ವಾರ್ಷಿಕಾಧಿವೇಶನವು ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯ ನಡೆವಳಿಕೆಗಳ ಸಂಕ್ಷಿಪ್ತ ವರದಿಯನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು.

ತಾ|| ೩೦-೭-೧೯೬೨ರಂದು ಪ್ರಾ. ೯-೩೦ ಗಂಟೆಗೆ ಪರಿಷತ್ತಿನಲ್ಲಿ ನಡೆಯ ಬೇಕಾಗಿದ್ದ ಸಕಲ ಸದಸ್ಯರ ವಿಶೇಷ ಸಭೆಯು ನಿರ್ದಿಷ್ಟ ಸಂಖ್ಯೆಯಷ್ಟು ಸದಸ್ಯರು ಆಗ ಹಾಜರಿರಲಿಲ್ಲವಾಗಿ ಸಭೆಯು ನಡೆಯಲಿಲ್ಲ.

## ಮಾನ್ಯ ದಾತಾರರ ಸಂದರ್ಶನ

ಕೇಂದ್ರ ಸರ್ಕಾರದ ಗೃಹ ಸಚಿವರೂ ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ, ನಾಡುನುಡಿಗಳ ಅಭಿಮಾನಿಗಳೂ ಆದ ಮಾನ್ಯ ಬಿ. ಎನ್. ದಾತಾರರನ್ನು ದಿನಾಂಕ ೩-೮-೧೯೬೨ರಂದು ಬೆಂಗಳೂರಿನ ಅವರ ನಿವಾಸದಲ್ಲಿ ಪರಿಷದಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಸಂದರ್ಶಿಸಿ ಶ್ರೀ ದಾತಾರರಿಗೆ ಪರಿಷತ್ತಿನ ಪರವಾಗಿ ಮಾಲಾರ್ಪಣ ಮಾಡಿದರು. ಮಾನ್ಯ ದಾತಾರರು ಮತ್ತೆ ಕೇಂದ್ರದ ಮಂತ್ರಿಗಳಾದ ಬಗೆಗೆ ಪರಿಷತ್ತಿನ ಸಂತೋಷವನ್ನು ವ್ಯಕ್ತಪಡಿಸಿದರು.

ಶ್ರೀ ದಾತಾರರು ಪರಿಷತ್ತಿನ ಪ್ರಗತಿಯ ಬಗೆಗೆ ತಮ್ಮ ಮೆಚ್ಚುಗೆ ತಿಳಿಯಪಡಿಸಿ, ಪರಿಷತ್ತಿನ ವಿದ್ವಾಂಸರು, ಬೆಳಗಾವಿ ನಿಪ್ಪಾಣಿ, ಸೊಲ್ಲಾಪುರ, ಅಕ್ಕಲಕೋಟೆ, ಜತ್ತಿ, ಗೋವಾ ಪ್ರದೇಶಗಳಲ್ಲಿ ಕನ್ನಡದ ಪ್ರಚಾರ ಕೈಗೊಳ್ಳಬೇಕೆಂದು ಸಲಹೆ ಮಾಡಿದರು. ಕನ್ನಡ ಕೋಶದ ಕಾರ್ಯವನ್ನು ಭರದಿಂದ ಮುಂದುವರಿಸಬೇಕೆಂದು ಹೇಳಿದರು. ತಾವು ಮತ್ತೊಮ್ಮೆ ಬೆಂಗಳೂರಿಗೆ ಬಂದಾಗ ಅಗತ್ಯವಾಗಿ ಕನ್ನಡ ಸಾಹಿತ್ಯ ಪರಿಷತ್ತನ್ನು ಸಂದರ್ಶಿಸುವುದಾಗಿ ಹೇಳಿದರು.

## ಕನ್ನಡಿಗರ ಬೇಡಿಕೆಗಳು

ಕಳೆದ ತಿಂಗಳಲ್ಲಿ ಬೆಂಗಳೂರಿನ ಶ್ರೀ ವೀರಕೇಸರಿ ಸೀತಾರಾಮಶಾಸ್ತ್ರಿಗಳ ನಾಯಕತ್ವದಲ್ಲಿ ಕನ್ನಡ ಸಂಯುಕ್ತ ರಂಗದ ನಿಯೋಗ ಗೋಷ್ಠಿಯೊಂದು ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರಲ್ಲಿ ಹೋಗಿ ಹದಿನಾರು ಬೇಡಿಕೆಗಳುಳ್ಳ ಮನವಿಯನ್ನು ಅರ್ಪಿಸಿತು. ಆ ಪೈಕಿ ಮುಖ್ಯವಾದವುಗಳಿವು :

(೧) ಮೈಸೂರು ರಾಜ್ಯವನ್ನು ಕರ್ನಾಟಕವೆಂದು ಕರೆಯತಕ್ಕದ್ದು ;

(೨) ರಾಜ್ಯದ ಶಾಲೆಗಳಲ್ಲಿಯೂ ವಿಶ್ವವಿದ್ಯಾನಿಲಯಗಳಲ್ಲಿಯೂ ಕನ್ನಡವನ್ನೇ ಸಾಧ್ಯವಾದಷ್ಟು ಮಟ್ಟಿಗೆ ಶಿಕ್ಷಣದ ಮಾಧ್ಯಮವನ್ನಾಗಿ ಮಾಡತಕ್ಕದ್ದು ;

(೩) ರಾಜ್ಯದ ಸಿನಿಮಾ ಮಂದಿರಗಳಲ್ಲಿ ಕನ್ನಡ ಚಲನಚಿತ್ರಗಳನ್ನು ಪ್ರದರ್ಶಿಸುವಂತೆ ನಿರ್ಬಂಧಿಸತಕ್ಕದ್ದು ;

(೪) ಕನ್ನಡ ಚಲನ ಚಿತ್ರಗಳನ್ನು ತಯಾರಿಸಲು ಸ್ಟುಡಿಯೋವನ್ನು ಸ್ಥಾಪಿಸತಕ್ಕದ್ದು ;

(೫) ಕನ್ನಡ ನಟ ನಟಿಯರಿಗೆ ಪ್ರೋತ್ಸಾಹವೀಯತಕ್ಕದ್ದು ;

(೬) ಕೈಬಿಟ್ಟು ಹೋಗಿರುವ ಕನ್ನಡ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಯುಕ್ತ ಪ್ರಯತ್ನಗಳನ್ನು ಮಾಡತಕ್ಕದ್ದು ;

(೭) ಸರ್ಕಾರದ ಸ್ವಾಮ್ಯದಲ್ಲಿರುವ ಕಾರ್ಖಾನೆಗಳಲ್ಲಿಯೂ ಮತ್ತಿತರ ಸಂಸ್ಥೆಗಳಲ್ಲಿಯೂ ಕನ್ನಡಿಗರಿಗೆ ಸುಪ್ರಾತಿನಿಧ್ಯವನ್ನು ದೊರಕಿಸಿಕೊಡಲು ಮಹನೀಯ ಯತ್ನಗಳನ್ನು ಮಾಡಬೇಕು ; ಮತ್ತು

(೮) ಕನ್ನಡ ಟೈಪ್‌ರೈಟರುಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ತಯಾರಿಸತಕ್ಕದ್ದು.

---

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

## ಕಾವ ಮತ್ತು ಜಾಣ ಸಾಹಿತ್ಯ ಪರೀಕ್ಷೆಗಳ ಫಲಿತಾಂಶ

೧೯೩೨ನೆಯ ಮೇ ತಿಂಗಳಲ್ಲಿ ಕರ್ಣಾಟಕದ ನಾನಾ ಕೇಂದ್ರಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆಸಿದ ಸಾಹಿತ್ಯ ಪರೀಕ್ಷೆಗಳ ಫಲಿತಾಂಶ ಈ ರೀತಿ ಇದೆ.

### ಕಾವ

**ಮೊದಲನೆಯ ತರಗತಿ**

40.

**ಎರಡನೆಯ ತರಗತಿ**

31 41 58.

**ಮೂರನೆಯ ತರಗತಿ**

4 6 7 9 15 17 18 21 22 23 26 27 28 42 61.

### ಜಾಣ

**ಮೊದಲನೆಯ ತರಗತಿ**

(ಅಂಕಗಳ ಅನುಕ್ರಮದಲ್ಲಿ)

1449 510 517 (497 1448).

**ಎರಡನೆಯ ತರಗತಿ**

195 210 212 256 258 283 285 292 293 298 318 323 324 327 344 387 393 410 457 460 462 463 465 466 473 474 476 486 487 488 489 490 491 492 493 494 495 496 498 499 500 501 502 503 504 505 506 507 509 511 512 513 518 520 522 523 524 526 527 528 529 530 531 532 533 534 535 536 537 538 539 540 541 542 543 544 547 548 551 552 553 554 556 557 569 573 574 607 608 616 622 639 777 782 791 792 793 816 846 1067 1102 1138 1150 1151 1152 1153 1155 1156 1157 1164 1236 1237 1238 1289 1293 1311 1348 1369 1401 1450 1451 1452 1453 1454 1455 1456 1457 1458 1461 1462 1463 1464 1465 1466 1467 1468 1469 1472 1474 1475 1476 1478 1479 1480 1481 1482 1483 1484 1485 1486 1487 1488 1492 1493 1494 1495 1496 1498 1502 1508 1509 1511 1512 1513 1514 1519 1520 1521 1522 1526 1528 1531 1532 1533 1534 1536 1538 1540 1546 1549 1677 1790 1793 1796 1800 1808 1816 1840 1872 1887 1933 1986 1996 2005 2009 2010 2011 2074 2080 2089 2090 2096 2097 2103 2117 2120 2122 2124 2125 2126 2220.

## ಮೂರನೆಯ ತರಗತಿ

73 74 75 76 79 81 84 105 108 122
123 125 128 129 130 134 136 137
138 139 140 141 142 149 150 152
153 154 156 158 159 160 161 164
167 170 173 175 179 181 182 185
191 198 204 211 213 214 216 218
219 220 221 222 223 224 225 226
227 228 233 236 237 239 241 242
246 251 257 259 260 282 286 288
289 290 291 294 295 296 297 300
302 305 306 307 308 309 310 311
312 313 317 319 320 321 322 325
326 329 330 331 332 333 334 335
337 343 345 346 347 348 349 350
351 352 353 354 355 357 358 359
360 361 362 363 364 366 367 369
370 374 375 376 377 378 379 384
385 388 389 390 391 396 397 398
406 412 414 418 419 425 428 429
432 433 435 436 437 444 445 446
447 448 449 451 452 455 461 464
468 475 514 521 546 549 550 558
559 560 561 562 563 564 566 567
568 570 571 580 581 582 584 585
587 609 610 612 614 615 632 634
635 640 641 642 643 644 645 646
647 648 649 650 652 653 654 655
656 657 658 659 660 662 664 665
667 668 669 670 674 675 676 685
689 691 695 697 698 699 701 702
703 704 705 706 707 708 709 711
712 713 714 715 716 717 719 720
722 723 724 725 726 727 728
729 731 732 734 735 736 737 738
739 740 741 742 743 745 746 747
749 750 751 752 754 756 757 758
759 760 761 763 764 765 766 767
769 770 771 772 773 774 775 776
780 781 784 788 789 796 797 798
799 800 801 802 805 811 813 815
817 820 821 823 824 827 828 830
831 832 833 836 837 840 841 842
843 844 847 850 852 859 861 862
863 864 867 868 869 875 876 879
886 900 901 902 904 905 906 925
927 928 930 938 939 954 957 964
965 974 997 998 1000 1001 1002
1008 1010 1019 1022 1024 1042 1048
1056 1058 1061 1062 1063 1069 1074
1075 1076 1077 1079 1087 1088 1103
1106 1115 1119 1120 1126 1127 1135
1136 1137 1139 1140 1144 1145 1146
1148 1160 1162 1165 1166 1171 1172
1173 1174 1175 1176 1177 1181 1183
1184 1188 1189 1192 1198 1199 1210
1212 1213 1214 1215 1216 1219 1222
1223 1224 1225 1226 1227 1228 1229
1235 1239 1242 1244 1247 1248 1249
1253 1254 1255 1256 1257 1259 1260
1261 1265 1266 1267 1268 1270 1271
1272 1273 1275 1276 1277 1278 1279
1280 1281 1282 1288 1290 1291 1292
1296 1301 1306 1307 1308 1310 1312
1314 1315 1318 1319 1320 1321 1322
1323 1324 1326 1329 1330 1331 1332
1333 1334 1337 1338 1339 1340 1341
1343 1344 1346 1347 1349 1350 1353
1354 1355 1357 1359 1360 1361 1362
1364 1366 1367 1370 1371 1374 1376
1377 1379 1380 1381 1383 1384 1385
1387 1389 1394 1395 1396 1399 1402
1405 1407 1408 1410 1411 1412 1413
1414 1415 1416 1418 1419 1420 1422
1423 1424 1425 1426 1428 1429 1430
1431 1432 1433 1434 1437 1439 1440

1441 1442 1459 1460 1470 1471 1491
1497 1501 1503 1510 1517 1518 1524
1529 1537 1541 1542 1543 1551 1552
1553 1554 1555 1563 1567 1569 1570
1574 1575 1576 1581 1583 1585 1588
1591 1592 1593 1596 1600 1601 1605
1606 1609 1614 1615 1616 1617 1627
1629 1633 1634 1637 1638 1649 1650
1651 1652 1653 1654 1656 1657 1658
1659 1665 1669 1673 1674 1676 1680
1697 1698 1704 1705 1715 1717 1721
1722 1726 1728 1729 1732 1738 1739
1740 1741 1744 1748 1791 1794 1798
1801 1802 1803 1809 1810 1811 1813
1817 1818 1819 1820 1821 1823 1824
1825 1826 1827 1828 1834 1835 1839
1844 1881 1883 1890 1899 1900 1901
1904 1905 1907 1908 1909 1910 1912
1913 1915 1916 1919 1926 1931 1934
1935 1937 1939 1940 1955 1960 1962
1963 1966 1967 1979 1982 1985 1987
1990 1991 1992 1993 1998 1999 2001
2002 2003 2004 2006 2008 2012 2013
2017 2018 2019 2021 2022 2023 2024
2025 2026 2027 2029 2032 2034 2035
2036 2038 2039 2041 2042 2043 2047
2049 2050 2051 2052 2055 2057 2059
2060 2062 2064 2065 2067 2068 2069
2071 2072 2076 2077 2078 2082 2085
2086 2088 2091 2093 2095 2099 2100
2101 2102 2104 2105 2106 2108 2109
2110 2111 2112 2113 2114 2115 2116
2121 2123 2127 2128 2131 2132 2133
2135 2136 2141 2143 2144 2149 2150
2152 2158 2161 2163 2164 2165 2180
2181 2184 2188 2190 2194 2198 2199
2200 2201 2203 2204 2205 2208 2210
2211 2213 2214 2218 2223 2224 2225
2228 2229 2230 2233 2238 2239 2240.

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು–೧೮

**ಅನ್ನದಾನಯ್ಯ ಪುರಾಣಿಕ**
**ಕೆ. ಎಂ. ಕೃಷ್ಣರಾಯರು**
ಗೌರವ ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

ಬೆಂಗಳೂರು

ಕರ್ನಾಟಕ ಸಂಯುಕ್ತರಂಗದ ನಿಯೋಗದವರಿಗೆ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು ಅವರ ಬೇಡಿಕೆಗಳ ಬಗ್ಗೆ ಸೂಕ್ತ ಸಹಾನುಭೂತಿ ವ್ಯಕ್ತಪಡಿಸಿ, ರಾಜ್ಯದ ಹೆಸರನ್ನು ಬದಲಾಯಿಸುವ ಮತ್ತು ಕನ್ನಡವನ್ನು ರಾಜ್ಯದ ಆಡಳಿತ ಭಾಷೆ ಮಾಡುವ ಬಗ್ಗೆ ಶೀಘ್ರದಲ್ಲಿಯೇ ಕ್ರಮ ಕೈಗೊಳ್ಳುವುದಾಗಿ ಭರವಸೆ ಇತ್ತರು.

ಜುಲೈ ೧೨ ರಂದು ನಗರದ ಓಕಲೀಪುರಂ ಕರ್ನಾಟಕ ಯುವಜನ ಸಂಘದ ಕಾರ್ಯಕಾರಿ ಸಮಿತಿಯವರು ಸೇರಿ, ಕೈಬಿಟ್ಟು ಹೋಗಿರುವ ಕನ್ನಡ ಪ್ರದೇಶಗಳನ್ನು ಮರಳಿ ತಾಯ್ನಾಡಿಗೆ ಪಡೆಯಲು ಸರ್ಕಾರ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ರಾಜ್ಯದ ಆಕಾಶವಾಣಿ ಕೇಂದ್ರಗಳಲ್ಲಿ ಕನ್ನಡಕ್ಕೆ ಹೆಚ್ಚು ಪ್ರಾಧಾನ್ಯತೆ ದೊರೆಯುವಂತೆ ಮಾಡಲು ತಾವು ಕೇಂದ್ರ ಸಚಿವ ಶ್ರೀ ಗೋಪಾಲ ರೆಡ್ಡಿಯವರಿಗೆ ಕೂಡಲೇ ಶಿಫಾರಸು ಮಾಡುವುದಾಗಿ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಸಂಯುಕ್ತ ರಂಗದ ನಿಯೋಗದವರಿಗೆ ತಿಳಿಸಿದ್ದಾರೆ. ನಗರದ ಕೇಂದ್ರ ಸರ್ಕಾರದ ಕಾರ್ಖಾನೆಗಳಲ್ಲಿ ಕನ್ನಡಿಗರಿಗೆ ಹೆಚ್ಚು ಉದ್ಯೋಗಾವಕಾಶವಿರಬೇಕೆಂಬ ತತ್ವವನ್ನೂ ಮುಖ್ಯಮಂತ್ರಿಯವರು ಒಪ್ಪಿಕೊಂಡು ಈ ಸಂಬಂಧದಲ್ಲಿ ಸಂಬಂಧಪಟ್ಟವರಿಗೆ ಶಿಫಾರಸು ಮಾಡುವುದಾಗಿ ಹೇಳಿದ್ದಾರೆ.

ಬೆಂಗಳೂರಿನ ಆಕಾಶವಾಣಿಯ ಕಾರ್ಯಕ್ರಮ ಸಲಹಾ ಸಮಿತಿಗೆ ಶ್ರೀ ಶಿವರಾಮ ಕಾರಂತರು ಸದಸ್ಯರಾಗಿ ಎರಡು ವರ್ಷಗಳವರೆಗೆ ನೇಮಕವಾಗಿದ್ದಾರೆ.

ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲನುಕೂಲಿಸುವಂತೆ ಸರ್ಕಾರ ಮಸೂದೆಯೊಂದನ್ನು ತಯಾರಿಸಿದೆ.

ಮೈಸೂರು ರಾಜ್ಯದ ಹೆಸರನ್ನು ಬದಲಾಯಿಸಬೇಕೆಂಬ ನಿರ್ಣಯವೊಂದು ವಿಧಾನಸಭೆಯ ಈ ಸಲದ ಅಧಿವೇಶನದಲ್ಲಿ ವಿಪುಲವಾಗಿ ಚರ್ಚೆನಡೆದು ಕೊನೆಗೆ ಮುಂದಿನ ಅಧಿವೇಶನಕ್ಕೆ ಅದು ಹೋಯಿತು. ಸದಸ್ಯರೊಬ್ಬರು ಸೂಚಿಸಿದ ಖಾಸಗೀ ನಿರ್ಣಯದಲ್ಲಿ 'ಕರ್ನಾಟಕ'ವೆಂದು ಬದಲಾಯಿಸಬೇಕೆಂದು ಸೂಚಿಸಲಾಗಿತ್ತು. ನಿರ್ಣಯದ ಪರವಾಗಿಯೂ, ವಿರೋಧವಾಗಿಯೂ ಬಹಳವಾಗಿ ಚರ್ಚೆಯಾಯಿತು.

'ಧರ್ಮಸ್ಥಳ ಮಹಾತ್ಮೆ' ಎಂಬ ಚಲನಚಿತ್ರದ ಉದ್ಘಾಟನಾ ಸಮಾರಂಭವನ್ನು ನೆರವೇರಿಸುತ್ತ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಕನ್ನಡ ಭಾಷೆ ಮತ್ತು ಸಂಸ್ಕೃತಿಗಳ ಪ್ರಗತಿಗೆ ಸರ್ಕಾರ ಶ್ರಮಿಸಲು ಸಿದ್ಧವಿದೆ ಎಂದೂ, ಆದರೆ ಜನರ ಪಾತ್ರ ಇತ್ತ ಹೆಚ್ಚಿನದಾಗಿರಬೇಕೆಂದೂ, ಅವರು ಅಭಿಮಾನ ತೋರಬೇಕೆಂದೂ ಹೇಳಿದರು.

ಪ್ರಸಿದ್ಧ ಕಲಾವಿದರಾದ ಮೈಸೂರಿನ ಶ್ರೀ ಕೆ. ವೆಂಕಟಪ್ಪನವರಿಗೆ ಅಗಸ್ಟ್ ೬ ರಂದು ಬೆಳಿಗ್ಗೆ ಅವರ ಗೃಹದಲ್ಲಿಯೇ ಕೇಂದ್ರ ಲಲಿತಕಲಾ ಅಕಾಡೆಮಿಯವರು ತಾಮ್ರಪತ್ರ ಮತ್ತು ಅಂಗವಸ್ತ್ರವನ್ನರ್ಪಿಸಿ ಗೌರವಿಸಿದರು.

ವೈಣಿಕಶಿಖಾಮಣಿ ವೀಣೆ ಶೇಷಣ್ಣನವರ ಸ್ಮಾರಕ ಸಭಾ ಸಂಸ್ಥೆಯವರು ಜುಲೈ ೧೭ ರಂದು ಸಂಜೆ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ವೀಣೆ ಶೇಷಣ್ಣ, ಬಿಡಾರಂ ಕೃಷ್ಣಪ್ಪ ಇವರ ಪುಣ್ಯದಿನವನ್ನೇರ್ಪಡಿಸಿದ್ದರು. ಸರ್ಕಾರದ ವಾರ್ತಾಧಿಕಾರಿಗಳಾದ ಶ್ರೀ ಸಿದ್ದಯ್ಯ ಪುರಾಣಿಕರು ಅಧ್ಯಕ್ಷರಾಗಿದ್ದರು. ಶೇಷಣ್ಣ ಮತ್ತು ಬಿಡಾರಂ ಕೃಷ್ಣಪ್ಪನವರನ್ನು ಕುರಿತು ಭಾಷಣಗಳಾದವು. ಗಾಯನ ಮತ್ತು ವೀಣಾವಾದನಗಳೇರ್ಪಟ್ಟಿದ್ದವು.

ಲೋಕಸಭೆಯ ಡೆಪ್ಯುಟಿ ಸ್ಪೀಕರ್ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು ಜುಲೈ ೧೮ ರಂದು ಕನ್ನಡ ಸಾಹಿತ್ಯ ಪರಿಷತ್ತಿಗೆ ಭೇಟಿ ಇತ್ತು ಕಾರ್ಯಕಲಾಪಗಳನ್ನು ಪರಿಚಯ ಮಾಡಿಕೊಂಡರು. ಪರಿಷತ್ತಿನ ಅಧ್ಯಕ್ಷರೂ ಕಾರ್ಯದರ್ಶಿಗಳೂ ಶ್ರೀಯುತರನ್ನು ಆದರದಿಂದ ಬರಮಾಡಿಕೊಂಡು ಪರಿಷತ್ತಿನ ಕಾರ್ಯಕಲಾಪಗಳನ್ನು ವಿವರಿಸಿದರು.

ಜುಲೈ ೨೧ ರಂದು ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡುತ್ತಾ, ಸರ್ವವಿಧದಲ್ಲೂ ಕನ್ನಡ ಭಾಷೆ ಹಾಗೂ ಸಾಹಿತ್ಯದ ಅಭಿವೃದ್ಧಿ ಸಾಧಿಸುವ ತೀವ್ರ ಆಕಾಂಕ್ಷೆ ಸರ್ಕಾರಕ್ಕಿದೆ ಎಂದು ತಿಳಿಸಿದರು.

ಜುಲೈ ೨೫ ರಂದು ಸಂಜೆ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ರಾಜಾಸ್ಥಾನದ ಕಲಾವಿದರು ಸೂತ್ರದ ಬೊಂಬೆ ಆಟವನ್ನು ಏರ್ಪಡಿಸಿದ್ದರು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ ೨೬-೭-೬೨ ರಂದು ಬೆಗಂಳೂರು ಆಕಾಶವಾಣಿಯಿಂದ ಕೈ॥ ಬಸವಪ್ಪ ಶಾಸ್ತ್ರಿಗಳು ಎಂಬ ವಿಷಯವನ್ನು ಕುರಿತು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಭಾಷಣ ಮಾಡಿದರು.

ದಿನಾಂಕ ೬-೮-೬೨ ರಂದು ಬೆಂಗಳೂರು ಸರ್ಪಭೂಷಣ ಮಠದಲ್ಲಿ ಶ್ರೀ ಚಿತ್ರದುರ್ಗ ಜಗದ್ಗುರು ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು "ಯಜ್ಞ-ದಾನ-ತಪಸ್ಸು" ಎಂಬ ವಿಷಯವಾಗಿ ಭಾಷಣ ಮಾಡಿದರು. ಶ್ರೀ ಟಿ. ಎನ್. ಚನ್ನಪ್ಪನವರು "ಪ್ರಭುಲಿಂಗ ಲೀಲೆ" ಕಾವ್ಯವಾಚನ ಮಾಡಿದರು.

### ಮೈಸೂರು

"ಸಾಹಿತ್ಯ ಕಲೆಯು ಕೇವಲ ಪುಸ್ತಕ ರಚನೆಯ ಕಸುಬಾಗ ಬಾರದು. ಆಧುನಿಕ ಸಾಹಿತ್ಯದ ಅಭಿವೃದ್ಧಿ ಸಾಧಿಸುವ ಭರದಲ್ಲಿ ಹಿಂದಿನಿಂದ ಬೆಳೆದು ಬಂದಿರುವ ಪರಂಪರೆಯ ಹಿತವನ್ನು ಕೈಬಿಡ ಬಾರದು" ಹೀಗೆಂದು ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ಆಗಸ್ಟ್ ೬ ರಂದು ಅಖಿಲ ಭಾರತದ ಲೇಖಕರ ಸಮ್ಮೇಳನದ ಮುಕ್ತಾಯ ಸನ್ನಿವೇಶದಲ್ಲಿ ತಿಳಿಸಿದರು.

ಕೃಷ್ಣರಾಜ ನಗರದಲ್ಲಿ ನಡೆದ ಲೇಖಕರ ಶಿಬಿರದಲ್ಲಿ ಮಾತ ನಾಡುತ್ತಾ, ಕನ್ನಡದ ಕವಿಗಳಾದ ಶ್ರೀ ಚೆನ್ನವೀರ ಕಣವಿ ಅವರು ಕನ್ನಡ ಪದ್ಯದ ಇತ್ತೀಚಿನ ಧಾಟಿಯನ್ನು ವಿಮರ್ಶಿಸಿದರು. ಹಿಂದಿನದನ್ನು ಮರೆಯಲಾಗುವುದಿಲ್ಲವೆಂದೂ, ಕಾಲಕಾಲಕ್ಕೆ ಆಗಿ ಬಂದಿರುವ ಬದಲಾವಣೆ ಬುದ್ಧಿವಂತಿಕೆಯಿಂದ ಅಳೆಯದೆ ಅರಿ ಯಲು ಸಾಧ್ಯವಿಲ್ಲವೆಂದೂ ಹೇಳಿ, ೧೯೩೦ ರಿಂದೀಚೆಗೆ ಕನ್ನಡ ಪದ್ಯ ಬೆಳೆದಿರುವುದನ್ನು ವಿವರಿಸಿದರು.

### ಶಿವಮೊಗ್ಗ

ಇಲ್ಲಿನ ಮತ್ತು ಸಮೀಪವಿರುವ ಭದ್ರಾವತಿ ಪೌರ ಸಂಸ್ಥೆ ಗಳು ತಮ್ಮ ಆಡಳಿತ ಭಾಷೆ ಕನ್ನಡವಾಗಿರಬೇಕೆಂದು ತೀರ್ಮಾ ನಿಸಿವೆ.

### ಕೊಣನೂರು

ಜುಲೈ ೨೦ ರಂದು ಇಲ್ಲಿನ ಬಿ. ಎಂ. ಶೆಟ್ಟಿ ಕಾಲೇಜು ಆವ ರಣದಲ್ಲಿ ಶ್ರೀಮತಿ ಪುಟ್ಟ ಕೃಷ್ಣಮೂರ್ತಿಯವರು ಜಾನಪದ ಸಾಹಿತ್ಯ ಕುರಿತು ಉಪನ್ಯಾಸ ಮಾಡಿದರು.

### ಹಿರಿಯೂರು

ಇಲ್ಲಿನ ವಿವಿಧ ಸಂಸ್ಥೆಗಳ ಪ್ರತಿನಿಧಿಗಳು ಜುಲೈ ೨೧ ರಂದು ಸಭೆ ಸೇರಿ ಕನ್ನಡ ಸಂಯುಕ್ತ ರಂಗವನ್ನು ಸ್ಥಾಪಿಸಿದರು. ಡಾ॥ ರಂಗಯ್ಯನವರು ಅಧ್ಯಕ್ಷರಾಗಿದ್ದರು. ರಂಗದ ಅಧಿಕಾರಿಗಳನ್ನು ಆರಿಸಲಾಯಿತು. ಕನ್ನಡದ ಹಿತವನ್ನು ಕಾಯುವುದೇ ಈ ರಂಗದ ಉದ್ದೇಶ.

### ರಾಮನಗರ

ಜುಲೈ ೨೧ ರಂದು ಇಲ್ಲಿನ ವಿವಿಧೋದ್ದೇಶ ಶಾಲೆಯಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಸೇರಿ ಕರ್ನಾಟಕ ಸಂಘವನ್ನು ಸ್ಥಾಪಿಸಿದರು.

### ಮುಂಬಯಿ

ಜುಲೈ ೧೪ ರಂದು ಇಲ್ಲಿನ ಕನ್ನಡ ಸಂಘದ ವಾಚನಾಲಯ ದಲ್ಲಿ ಕನ್ನಡ ಸಾಹಿತ್ಯಕೂಟದ ಸಾಮಾನ್ಯ ಸಭೆ ನಡೆಯಿತು. ಈ ಸಭೆಗೆ ಉಡುಪಿಯ ಶ್ರೀ ಹರಿದಾಸ ಭಟ್ಟರು ಆಗಮಿಸಿದ್ದರು. ಇವರು 'ಜೀ. ವಿ.' ಅವರು ಬರೆದಿರುವ 'ಧೃತರಾಷ್ಟ್ರ ಸಂತಾನ' ಎಂಬ ಕಥಾಸಂಗ್ರಹವನ್ನು ಉದ್ಘಾಟಿಸಿದರು.

### ದೆಹಲಿ

ಬರುವ ಅಕ್ಟೋಬರು ತಿಂಗಳಲ್ಲಿ ೧೪ ನೇ ಹೊರನಾಡ ಕನ್ನಡಿಗರ ಸಮ್ಮೇಳನವು ಅಲ್ಲಿನ ಕರ್ನಾಟಕ ಸಂಘದ ಆಶ್ರಯ ದಲ್ಲಿ ನಡೆಯುವುದು. ಈ ಸಮ್ಮೇಳನಕ್ಕೆ ಮೈಸೂರು, ಆಂಧ್ರ, ಗುಜರಾತ್ ಮತ್ತು ಇತರ ರಾಜ್ಯಗಳಲ್ಲಿರುವ ಕನ್ನಡಿಗರು ಬಂದು ಭಾಗವಹಿಸಲಿದ್ದಾರೆ.

---

# ಸಂಪಾದಕೀಯ

## ೧. ಶ್ರೀಮನ್ಮಹಾರಾಜರವರಿಗೆ ಡಾಕ್ಟರೇಟ್ ಪ್ರಶಸ್ತಿ

ಕನ್ನಡ ಸಾಹಿತ್ಯ ಪರಿಷತ್ತಿನ ಮಹಾ ಪೋಷಕರೂ, ಮೈಸೂರಿನ ರಾಜ್ಯಪಾಲರೂ, ಕರ್ನಾಟಕ ರಾಜ್ಯ ಸಿಂಹಾಸನಾಧೀಶರೂ, ದಾರ್ಶನಿಕರೂ, ಶಿಕ್ಷಣವೇತ್ತರೂ, ಮಹಾದಾನಿಗಳೂ, ರಾಜರ್ಷಿಗಳೂ ಎನಿಸಿದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರಿಗೆ ಮೈಸೂರು ವಿಶ್ವವಿದ್ಯಾನಿಲಯವು ೧೯೬೬ನೆಯ ಜುಲೈ ೧೨ರಂದು ವಿಶೇಷ ಘಟಿಕೋತ್ಸವವನ್ನು ಜರುಗಿಸಿ "ಡಾಕ್ಟರ್ ಆಫ್ ಲಾಸ್" (LL.D.) ಎಂಬ ಪ್ರಶಸ್ತಿಯನ್ನು ನೀಡಿ ತನ್ನನ್ನು ತಾನೇ ಗೌರವಿಸಿಕೊಂಡಿದೆ. ಶ್ರೀ ಒಡೆಯರು ಭಾರತೀಯ ಸಂಸ್ಕೃತಿಯ ಸಾಕಾರ ಸ್ವರೂಪರೆನಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯವು ತನ್ನ ೪೯ ವರ್ಷಗಳ ಆಯುಷ್ಯದಲ್ಲಿ ಗೌರವಿಸಿದ ಪ್ರಥಮ ಮೈಸೂರಿನ ಅರಸು ಮತ್ತು ಪ್ರಥಮ ಕುಲಪತಿಯಾಗಿದ್ದಾರೆ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರು. ಈ ಅಪೂರ್ವ ಗೌರವಕ್ಕೆ ಪಾತ್ರರಾದ ಮಹಾರಾಜರು ಕನ್ನಡಿಗರ ಹಾರ್ದವಾದ ಅಭಿನಂದನೆಗಳಿಗೆ ಅರ್ಹರಾಗಿದ್ದಾರೆ. ಕನ್ನಡ ಸಾಹಿತ್ಯ, ಕಲೆ, ಹಾಗೂ ಸಂಸ್ಕೃತಿಗಳ ಪೋಷಕರೂ, ಕನ್ನಡ ಕುಲದೀಪಕರೂ ಆದ ಶ್ರೀಮನ್ಮಹಾರಾಜರಿಗೆ ದೊರೆತ ಈ ಅಮೂಲ್ಯ ಪ್ರಶಸ್ತಿಯ ಸಮಾಚಾರದಿಂದ ಕನ್ನಡ 'ನುಡಿ'ಗೆ ಅಪಾರವಾದ ಆನಂದ ಉಂಟಾಗಿದೆ.

ಶ್ರೀಮನ್ಮಹಾರಾಜರು, ಉಪಕುಲಪತಿಗಳಾದ ಪ್ರೊ|| ಎನ್. ಎ. ನಿಕ್ಕಂ ಅವರು ಹೇಳಿದಂತೆ "ವಿದ್ಯಾವಿನಯಾದಿ ಸಂಪನ್ನರು, ದೊರೆಗಳಲ್ಲಿ ದಾರ್ಶನಿಕ"ರು. ಡಾ|| ಸಿ. ವಿ. ರಾಮನ್ ಅವರು ನುಡಿದಂತೆ "ರಾಜರ್ಷಿ"ಗಳು, "ಭಾರತದ ಸುಪುತ್ರರು", "ಪ್ರಾಚೀನ ಭಾರತದ ಅಧಿಕೃತವಾಣಿ", ಎನ್ನಿಸಿದ್ದಾರೆ. ಅವರು ಸಾಹಿತ್ಯ ಪೋಷಕರೂ ಅಹುದು, ಶ್ರೇಷ್ಠ ಸಾಹಿತಿಗಳೂ ಅಹುದು. ಲಕ್ಷಾವಧಿ ರೂಪಾಯಿಗಳನ್ನು ದಾನ ನೀಡಿದ್ದಾರೆ. ಅವರು ಕೊಡುಗೈದೊರೆಗಳು, ತ್ಯಾಗವೀರರು. ರಾಜ್ಯಪಾಲರಾಗಿ ರಾಜ್ಯಪಾಲರ ವೇತನವನ್ನು ಸ್ವೀಕರಿಸದೆಯೇ ರಾಷ್ಟ್ರಸೇವೆ ಮಾಡುತ್ತಲಿರುವ ಏಕಮಾತ್ರ ವ್ಯಕ್ತಿ ಅವರು. ಅವರ ಪೂರ್ವಜರು ಹಾಕಿಹೋದ ಉಚ್ಚ ಹಾಗೂ ಆದರ್ಶ ಸಂಪ್ರದಾಯಗಳನ್ನು ಇನ್ನಷ್ಟು ಉಜ್ವಲಗೊಳಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ವಿದ್ಯೆ, ವಿನಯ, ಸಂಪನ್ನತೆ, ಸಂಪತ್ತು, ಅಧಿಕಾರ, ವಿಶ್ವ ವಿಶಾಲದೃಷ್ಟಿ, ವಿಶ್ವವ್ಯಕ್ತಿತ್ವವನ್ನು ಪಡೆದ ಶ್ರೀಮನ್ಮಹಾರಾಜರು ಭಾರತೀಯರ ಅಮೂಲ್ಯ ನಿಧಿಯಾಗಿದ್ದಾರೆ.

ವಿದೇಶಗಳಲ್ಲಿ ಸಂಚರಿಸಿ, ಭಾರತೀಯ ತತ್ತ್ವಜ್ಞಾನ, ತಾಟಸ್ಥ್ಯನೀತಿ, ಪರಂಪರೆ, ಹಾಗೂ ಸಾಹಿತ್ಯ ಕಲೆಗಳನ್ನು ಕುರಿತು ಅವರು ನೀಡಿದ ಉಪನ್ಯಾಸಗಳು ಅವರ ಮಹೋನ್ನತ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ. ಶ್ರೀಮನ್ಮಹಾರಾಜರು ಕಿರಿಯ ವಯಸ್ಸಿನಲ್ಲಿಯೇ ಹಿರಿಯ ಕೀರ್ತಿಯನ್ನು ಸಂಪಾದಿಸಿದ್ದಾರೆ. ಅವರ ಭವಿಷ್ಯ ಉಜ್ವಲವಾಗಿದೆ. ಅವರಿಗಾಗಿ ರಾಷ್ಟ್ರದಲ್ಲಿ ಮಿಗಿಲಾದ, ಉನ್ನತವಾದ ಸ್ಥಾನಗಳು ಕಾದಿವೆ. ಅವರ ಬೆಳವಣಿಗೆಯಲ್ಲಿ, ಅವರ ಹೆಚ್ಚಳ ಹೆಗ್ಗಳಿಕೆಯಲ್ಲಿ, ಕನ್ನಡ ನಾಡಿನ ಮೇಲ್ಮೆ ಅವಿತುಕೊಂಡಿದೆ, ಭಾರತದ ಭವ್ಯತೆ ಬೆರೆತುಕೊಂಡಿದೆ ಎಂದು ನಮ್ಮ ಭಾವನೆ.

'ಕನ್ನಡ ನುಡಿ' ತನ್ನ ಹಾರ್ದವಾದ ಅಭಿನಂದನೆಗಳನ್ನು ಮಹಾರಾಜರಿಗೆ ಅರ್ಪಿಸಿ ಅವರಿಗೆ ದೀರ್ಘಾಯು, ದೃಢಾರೋಗ್ಯ ಹಾಗೂ ಸಕಲ ಸಂಪತ್ತು ಸತ್ಕೀರ್ತಿಗಳನ್ನು ಬಯಸುತ್ತದೆ.

## ೨. ಕಲಾವಿದ ಶ್ರೀ ಕೆ. ವೆಂಕಟಪ್ಪನವರಿಗೆ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ.

'ಕಲಾ ಪ್ರಪಂಚದ ಕಣ್ಣು' ಶ್ರೀ ಕೆ. ವೆಂಕಟಪ್ಪನವರಿಗೆ ಭಾರತ ಲಲಿತಕಲಾ ಅಕಾಡೆಮಿಯು 'ಫೆಲೊ' ಸ್ಥಾನವನ್ನು ನೀಡಿ ಅಕಾಡೆಮಿಯ ಗೌರವದ ಪ್ರತೀಕವೆಂದು ತಾಮ್ರಪತ್ರವನ್ನೂ ಮತ್ತು ಅಂಗವಸ್ತ್ರವನ್ನೂ ಅರ್ಪಿಸಿ ಗೌರವಿಸಿತು. ಈ ಸನ್ಮಾನ ಸಮಾರಂಭವು ಆಗಸ್ಟ್ ೬ ನೆಯ ತಾರೀಖು, ಸೋಮವಾರ ಮಲ್ಲೇಶರಂನಲ್ಲಿರುವ ಅವರ ಸ್ವಗೃಹದಲ್ಲಿ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರೂ, ಗುಜರಾತದ ರಾಜ್ಯಪಾಲರೂ ಆದ ಶ್ರೀ ಮೇಧಿ ನವಾಜ್ ಜಂಗ್ ಅವರ ನೇತೃತ್ವದಲ್ಲಿ ನಡೆಯಿತು. ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರು, ಶಿಕ್ಷಣ ಮಂತ್ರಿ ಶ್ರೀ ಎಸ್. ಆರ್. ಕಂಠಿಯವರು ಮತ್ತು ಕೆಲವು ಜನ ಹಿರಿಯ ಕಲಾವಿದರು, ಸಾಹಿತಿಗಳು ಈ ಸರಳ ಸಮಾರಂಭದಲ್ಲಿ ಭಾಗವಹಿಸಿ ಖ್ಯಾತ ಕಲಾವಿದರಾದ ಶ್ರೀ ವೆಂಕಟಪ್ಪನವರಿಗೆ ತಮ್ಮ ಗೌರವವನ್ನು ವ್ಯಕ್ತಪಡಿಸಿದರು.

ಶ್ರೀ ನಾಲ್ವಡಿ ಕೃಷ್ಣರಾಜರ ಕೃಪಾಶಯದಲ್ಲಿ ಬೆಳಕಿಗೆ ಬಂದ ಶ್ರೀ ಕೆ. ವೆಂಕಟಪ್ಪನವರು ಭಾರತದ ಕಲಾ ಪ್ರಪಂಚದಲ್ಲಿ ಹೊಸ ದಿಗಂತವನ್ನು ಬೆಳಗಿದ ಪಥಪ್ರದರ್ಶಕರು. ಅವರ ಅಖಂಡ ಕಲಾರಾಧನೆಯ ಫಲವಾಗಿ ಹೊರಬಿದ್ದ ಅವರ ಕಲಾಕೃತಿಗಳು ಕಲಾದೇವಿಯ ರತ್ನ ಕಿರೀಟವನ್ನು ಸೇರಲರ್ಹವಾದ ಅನರ್ಘ್ಯ ರತ್ನಗಳು. ಈ ತಲೆಮಾರಿನ ಹಿರಿಯ ಕಲಾವಿದರ ಪಂಕ್ತಿಗೆ ಸೇರಿದ ಶ್ರೀ ವೆಂಕಟಪ್ಪನವರು

ಕನ್ನಡಿಗರು, ಕನ್ನಡಿಗರ ಹೆಮ್ಮೆ, ಕೋಡು. ಅವರು ಕನ್ನಡ ನಾಡಿಗೆ ತಂದ ಕೀರ್ತಿ ಗೌರವಕ್ಕೆ ಪ್ರತಿಯಾಗಿ ಕನ್ನಡಿಗರು ಅವರಿಗೆ ಏನು ಸಲ್ಲಿಸಿದ್ದಾರೆ? ಬೆಂಗಳೂರಿನಲ್ಲಿ ವಾಸವಾಗಿರುವ ಈ ರಸ ಋಷಿಯ ಪರಿಚಯ ಎಷ್ಟು ಜನಕ್ಕಿದೆ? ಈ ಕಲಾ ತಪಸ್ವಿಯ ಕಲಾಶ್ರಮವನ್ನು ಎಷ್ಟು ಜನ ನೋಡಿ ಪುನೀತರಾಗಿದ್ದಾರೆ? ಈ 'ಕುಂಚಬ್ರಹ್ಮ'ನ ಕಷ್ಟ ಸಂಕಟಗಳನ್ನು ಯಾರು ವಿಚಾರಿಸಿದ್ದಾರೆ? ಅವರ ಕಲಾ ಪ್ರತಿಭೆ, ನಿಪುಣತೆ, ವಿನೂತನ ದೃಷ್ಟಿ, ಅನುಭವದ ಪ್ರಯೋಜನವನ್ನು ಪಡೆಯಲು ಸರ್ಕಾರವಾಗಲೀ ಅಥವಾ ಸಾರ್ವಜನಿಕರಾಗಲೀ ಸಮರ್ಥರಾಗದಿರುವುದು ದುರ್ದೈವದ ಸಂಗತಿ. ಕಲಾವಿದರ, ಸಾಹಿತ್ಯ ಭಕ್ತರ ಯೋಗಕ್ಷೇಮವನ್ನು ವಿಚಾರಿಸಿ, ಅವರಿಗೆ ಬೇಕಾದ ಅನುಕೂಲತೆಗಳನ್ನೂ, ಪ್ರೋತ್ಸಾಹವನ್ನೂ ನೀಡುವ ಕಾಲ ಬರುವವರೆಗೆ ಕನ್ನಡ ಸಾಹಿತ್ಯ, ಕಲೆಗಳು ವ್ಯಾಪಕ ಪ್ರಮಾಣದಲ್ಲಿ ಬೆಳೆಯಲಾರವು; ಬೆಳಗಲಾರವು. ಕಲಾವಿದರನ್ನು ಗೌರವಿಸುವುದು ಶ್ರೇಷ್ಠ ಸಂಪ್ರದಾಯವೇ. ಅಷ್ಟರಿಂದಲೇ ಅವರ ಸಮಸ್ಯೆಗಳ ಪರಿಹಾರವಾಗಲಾರದು.

ಪ್ರತಿ ರಾಜ್ಯದಲ್ಲಿಯೂ ಕಲಾ ಎಂಪೋರಿಯಂ ಸ್ಥಾಪಿಸಬೇಕೆಂಬ ಶ್ರೀ ಮೋಧಿ ನವಾಜ ಜಂಗರ ಸಲಹೆ ಸ್ವಾಗತಾರ್ಹವಾದುದು. ಶ್ರೀ ಕೆ. ವೆಂಕಟಪ್ಪನವರಂಥ ಶ್ರೇಷ್ಠ ಕಲಾವಿದರು ಜೀವಂತರಾಗಿರುವಾಗಲೇ ಅವರ ಕೃತಿಗಳನ್ನು ಸಂಗ್ರಹಿಸಿ ಸಾರ್ವಜನಿಕರಿಗೆ ಪ್ರದರ್ಶಿಸುವ ಯೋಜನೆಯನ್ನು ಸರ್ಕಾರವು ಕೈಕೊಂಡು ಕಾರ್ಯರೂಪದಲ್ಲಿ ತರಲಿ, ಅದಕ್ಕೆ ಸಾರ್ವಜನಿಕರು ಸಹಕಾರ ಸಹಾಯಗಳನ್ನು ನೀಡಲಿ, ಎಂದು ನಾವಿಲ್ಲಿ ಸೂಚಿಸ ಬಯಸುತ್ತೇವೆ.

ಎಲ್ಲ ಕಾಲದಲ್ಲೂ ಬೆಳಗಿ ಬೆಲೆಬಾಳಬಲ್ಲ ಅಮರ ಕೃತಿಗಳನ್ನು ರಚಿಸಿ ಭಾರತದ ಕೀರ್ತಿಯನ್ನು ವಿಸ್ತರಿಸಿ ಲಲಿತ ಕಲಾ ಅಕಾಡೆಮಿಯಿಂದ ಸನ್ಮಾನಿತರಾದ ಶ್ರೀ ಕೆ. ವೆಂಕಟಪ್ಪನವರಿಗೆ 'ನುಡಿ'ಯು ಅಂತಃಕರಣಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸಿ ಅವರಿಗೆ ಆಯುರಾರೋಗ್ಯ ಸಂಪತ್ತನ್ನು ಬಯಸುತ್ತದೆ.

## ೩. ರಾಜ್ಯದ ಹೆಸರು 'ಕರ್ನಾಟಕ'ವೆಂದು ತೀರ್ಮಾನಿಸಬೇಕಾಗಿತ್ತು.

ರಾಜ್ಯದ ಹೆಸರು 'ಕರ್ನಾಟಕ'ವೆಂದಾಗಬೇಕೆಂಬ ಖಾಸಗಿ ನಿರ್ಣಯದ ಮೇಲೆ ಸಾಕಷ್ಟು ಚರ್ಚೆ ನಡೆದು ತೀರ್ಮಾನ ಕೈಗೊಳ್ಳುವ ಕಾಲ ಸನ್ನಿಹಿತವಾದಾಗ ಮುಖ್ಯಮಂತ್ರಿಗಳು ಮಾಡಿಕೊಂಡ ಮನವಿಯಂತೆ ಶಾಸನ ಸಭಾಧ್ಯಕ್ಷರು ನಿರ್ಣಯದ ಚರ್ಚೆಯನ್ನು ಮುಂದಕ್ಕೆ ಹಾಕಿದ್ದು ಪತ್ರಿಕೆಯಲ್ಲಿ ವರದಿಯಾಗಿದೆ. ಈ ಸಲ ಈ ವಿಷಯ ತಪ್ಪದೆ ತೀರ್ಮಾನವಾಗುತ್ತದೆ, ಎಂದು ನಂಬಿದವರಿಗೆ ಈ ನಿರ್ಧಾರವು ನಿರಾಶೆಯನ್ನುಂಟುಮಾಡಿದೆ ಎಂದು ನಾವು ಭಾವಿಸುತ್ತೇವೆ.

ರಾಜ್ಯದ ಹೆಸರಿನ ಪ್ರಶ್ನೆ ನೂತನ ರಾಜ್ಯ ನಿರ್ಮಾಣವಾದ ದಿನದಿಂದಲೂ ಶಾಸಕರೆದುರಿಗಿದೆ. ಭಾಷಾನುಗುಣ ತತ್ವದ ಮೇಲೆ ನವೀನ ರಾಜ್ಯಗಳು ರೂಪುಗೊಂಡವು. ತೆಲುಗು ಭಾಷೆಯನ್ನಾಡುವ ಜನ ಆಂಧ್ರ ಪ್ರದೇಶವನ್ನು ಪಡೆದರು. ಮಹಾರಾಷ್ಟ್ರೀಯರು ಮಹಾರಾಷ್ಟ್ರವನ್ನು ಸಂಪಾದಿಸಿದರು. ಗುಜರಾತಿ ಬಂಧುಗಳು ಗುಜರಾತ ರಾಜ್ಯವನ್ನು ಗಳಿಸಿದರು. ಆದರೆ ಕನ್ನಡಿಗರ ದುರದೃಷ್ಟವೆನ್ನಬೇಕು 'ಕರ್ನಾಟಕ' ಎಂದು ರೂಪುಗೊಳ್ಳಬೇಕಾಗಿದ್ದ ನಾಡು, ಕೊನೆಯ ಗಳಿಗೆಯಲ್ಲಿ 'ಮೈಸೂರು' ಎಂದು ಹೆಸರು ಪಡೆಯಿತು. ಅಂದಿನಿಂದ ಇಂದಿನವರೆಗೂ ಹೆಸರಿನ ಬಗ್ಗೆ ವಿವಾದ ನಡೆದಿದೆ. ಸುಮಾರು ಐವತ್ತು ಖಾಸಗಿ ನಿರ್ಣಯಗಳು ಈ ರಾಜ್ಯದ ಹೆಸರು 'ಕರ್ನಾಟಕ'ವಾಗಬೇಕೆಂದು ಸೂಚಿಸುತ್ತಲಿವೆ. ರಾಜ್ಯದ ಶಾಸನ ಸಭೆಯಲ್ಲಿ ಈ ವಿಷಯದ ಬಗ್ಗೆ ಕೆಲವು ಸಲ ಚರ್ಚೆಯೂ ನಡೆದಿದೆ. ಕಳೆದ ವರ್ಷವೂ ಈ ಬಗ್ಗೆ ಸುದೀರ್ಘ ಚರ್ಚೆ ನಡೆದು ತೀರ್ಮಾನವಾಗಬೇಕಾಗಿದ್ದ ಗಳಿಗೆಯಲ್ಲಿ ಅಂದಿನ ಮುಖ್ಯಮಂತ್ರಿಗಳು ಪ್ರವೇಶಿಸಿ ಚರ್ಚೆಯು ಮುಂದೆ ಹೋಗುವಂತೆ ಮಾಡಿದ್ದನ್ನಿಲ್ಲಿ ಸ್ಮರಿಸಬಹುದಾಗಿದೆ. ಈ ಸಲವೂ ಹಳೆಯ ಹಾಡನ್ನೇ ಹಾಡದೆ, ರಾಜ್ಯದ ಹೆಸರು 'ಕರ್ನಾಟಕ'ವೆಂದು ತೀರ್ಮಾನಿಸಬೇಕಾಗಿತ್ತು.

ರಾಜ್ಯದ ಹೆಸರು 'ಕರ್ನಾಟಕ'ವಾಗಬೇಕೆಂದು ರಾಜ್ಯದ ಪ್ರಮುಖ ಸಂಘ ಸಂಸ್ಥೆಗಳು, ಪ್ರಸಿದ್ಧ ಸಾಹಿತಿಗಳು, ಕವಿಗಳು, ಕಲಾವಿದರು, ವ್ಯಾಪಾರಿಗಳು, ಮೊದಲಾದವರು ಬಯಸುತ್ತಾರೆ. ಇತ್ತೀಚೆಗೆ ಈ ವಿಷಯದಲ್ಲಿ ಕನ್ನಡ ಚಳುವಳಿಯೂ ಪ್ರಸಿದ್ಧ ಸಾಹಿತಿಗಳ ನೇತೃತ್ವದಲ್ಲಿ ನಡೆದಿದೆ. ಕನ್ನಡ ಸಾಹಿತ್ಯ ಪರಿಷತ್ತು ಈ ಬೇಡಿಕೆಯನ್ನು ಕಳೆದ ಕೆಲವಾರು ವರ್ಷಗಳಿಂದಲೂ ಮಂಡಿಸುತ್ತಲೇ ಬಂದಿದೆ. ಬಹು ಜನ ಶಾಸಕರೂ ಇದನ್ನೇ ಅಪೇಕ್ಷಿಸುತ್ತಾರೆ. ಜನಮತ ಪಡೆದರೆ ಜನರು 'ಕರ್ನಾಟಕ'ವೆಂಬ ಹೆಸರನ್ನೇ ಇಚ್ಛಿಸುತ್ತಾರೆ. ಅಭಿಮಾನಕ್ಕಾಗಿಯೋ, ಅರಿಯದೆಯೋ ಅಥವಾ ತಮ್ಮ ಮುಖಂಡತ್ವವನ್ನು ಬೆಳೆಸಿಕೊಳ್ಳುವ ದೃಷ್ಟಿಯಿಂದಲೋ ಕೆಲವು ಜನ ಮಹನೀಯರು ಹೆಸರಿನ ಬದಲಾವಣೆ ಬೇಡವೆಂದು ವಾದಿಸುತ್ತಿದ್ದಾರೆ. ನಾಡು ಏಕೀಕರಣವಾಗುವ ಕಾಲದಲ್ಲೂ ಇಂಥ ಅಪಸ್ವರಗಳು ಇದ್ದಿಲ್ಲವೆಂತಲ್ಲ. ಆಗಲೂ ಇಂಥ ಧ್ವನಿ ಕೆಲವು ಕಡೆ ಕೇಳಿದ್ದುಂಟು. ಇಂಥ ವಿಷಯದಲ್ಲಿ ಸರ್ವಾನುಮತದ ತೀರ್ಮಾನ ಗಗನ ಕುಸುಮವೇ ಸರಿ. ಪ್ರಜಾ ಪ್ರಭುತ್ವದಲ್ಲಿ ಬಹು ಸಂಖ್ಯಾಕರ ತೀರ್ಮಾನವೇ ತೀರ್ಮಾನ. ಆ ತೀರ್ಮಾನಕ್ಕೆ ಅಲ್ಪಸಂಖ್ಯಾಕರು

ತಲೆಬಾಗಲೇಬೇಕು. ಅದು ಸಂಪ್ರದಾಯ, ನೀತಿ, ವಿಧಿ. ಭೌಗೋಲಿಕವಾಗಿಯೂ, ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿಯೂ ಈ ರಾಜ್ಯಕ್ಕೆ 'ಕರ್ನಾಟಕ' ವೆಂಬ ಹೆಸರೇ ಸೂಕ್ತ.

ರಾಜ್ಯದ ಹೆಸರಿನ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಜನಾಭಿಮತವೂ ಸ್ಪಷ್ಟವಾಗಿದೆ. ಶಾಸನ ಸಭೆಯ ಅಮೂಲ್ಯ ಕಾಲ ಅಗತ್ಯಕ್ಕಿಂತಲೂ ಹೆಚ್ಚಾಗಿ ವ್ಯಯವಾಗಿದೆ. ಈ ವಿಷಯದ ಚರ್ಚೆಯನ್ನು ಮುಂದುವರಿಸಬಾರದಾಗಿತ್ತು. ತೀರ್ಮಾನ ತೆಗೆದುಕೊಳ್ಳಬೇಕಾಗಿದ್ದಾಗ ಮುಖ್ಯ ಮಂತ್ರಿಗಳು ಅನಿರೀಕ್ಷಿತ ಸಲಹೆಯನ್ನು ಮಂಡಿಸಿದ್ದು ಮತ್ತು ಅದನ್ನು ಒಪ್ಪಿಕೊಂಡು ಚರ್ಚೆ ಮುಂದಕ್ಕೆ ಹೋದದ್ದು ವಿಷಾದಕರ ಸಂಗತಿ. ಗಂಭೀರ ಸಮಸ್ಯೆಗಳನ್ನು ಶಾಂತಿ ಸೌಹಾರ್ದಗಳ ವಾತಾವರಣದಲ್ಲಿ ಬಿಡಿಸುವುದು ಯಾವಾಗಲೂ ಶ್ರೇಯಸ್ಕರವಾದ ಮಾರ್ಗವೇ. ಇದನ್ನು ನಾವು ಒಪ್ಪುತ್ತೇವೆ. ಆದರೆ ನಿರ್ಣಯದ ಚರ್ಚೆಯನ್ನು ಮುಂದೂಡುವುದಕ್ಕೆ ಸಾಕಷ್ಟು ಸಬಲ ಕಾರಣಗಳು ಇರಲಿಲ್ಲವೆಂದು ನಮ್ಮ ಅಭಿಪ್ರಾಯ. ಇಂದು ವಿರೋಧಿಸಿದ ಜನ ನಾಳೆಯೂ ವಿರೋಧಿಸುತ್ತಾರೆ. ವಿರೋಧಿಗಳ ಹೃದಯವನ್ನು ಗೆಲ್ಲಲು ಮುಖ್ಯ ಮಂತ್ರಿಗಳು ಕಾಲವನ್ನು ತೆಗೆದುಕೊಂಡಿದ್ದರೆ ಅದು ಸಂತೋಷದ ವಿಷಯವೇ. ಮಾನ್ಯ ನಿಜಲಿಂಗಪ್ಪನವರಂಥ ಹಿರಿಯ ವ್ಯಕ್ತಿಗಳಿಗೆ ಇದು ಅಸಾಧ್ಯ ಕಾರ್ಯವೇನೂ ಅಲ್ಲ. ಅವರು ಈ ಕಾರ್ಯದಲ್ಲಿ ಜಯಶೀಲರಾಗಲೆಂದು ಹಾರೈಸುತ್ತೇವೆ.

ಮುಂದಿನ ಅಧಿವೇಶನದಲ್ಲಿ ಹೆಸರಿನ ಸಮಸ್ಯೆಯನ್ನು ಮತ್ತು ಆಡಳಿತ ಭಾಷೆಯ ಪ್ರಶ್ನೆಯನ್ನು ನಿಜಲಿಂಗಪ್ಪ ಮಂತ್ರಿ ಮಂಡಲವು ಸಮರ್ಪಕ ರೀತಿಯಲ್ಲಿ ಬಿಡಿಸುವುದರಲ್ಲಿ ಸಮರ್ಥವಾಗುವುದೆಂದು ನಾವು ಸಂಪೂರ್ಣ ನಂಬಿದ್ದೇವೆ. ಆಡಳಿತ ಭಾಷೆಯ ಕರಡು ಮಸೂದೆ ಶಾಸನವಾಗಿ ಬೇಗ ಹೊರಬೀಳಲೆಂದೂ, ಮತ್ತು ಈ ರಾಜ್ಯದ ಹೆಸರು 'ಕರ್ನಾಟಕ'ವೆಂದು ಬಹು ಬೇಗ ಘೋಷಿಸಲ್ಪಡಲೆಂದೂ ನಾವು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ೪. ಕಂಬನಿ

### ದಿ|| ಶ್ರೀ ಎಂ. ವಿ. ಸುಬ್ಬಯ್ಯನಾಯ್ಡು

ಕನ್ನಡ ನಾಡು ವರನಟ ಶ್ರೀ ಎಂ. ವಿ. ಸುಬ್ಬಯ್ಯನಾಯ್ಡು ಅವರನ್ನು ಕಳೆದುಕೊಂಡಿತು. ಶ್ರೇಷ್ಠ ನಟ, ಗಾಯಕ, ನಿರ್ಮಾಪಕ, ನಿರ್ದೇಶಕ, ಸಂಘಟನಾ ಚತುರ, ಸ್ನೇಹಜೀವಿ, ಶ್ರೀ ನಾಯ್ಡು ಅವರು ಕನ್ನಡ ನಾಟಕ ಪ್ರಪಂಚದ ನಕ್ಷತ್ರಗಳಲ್ಲಿ ಒಬ್ಬರು. ಸುಮಾರು ಐವತ್ತು ವರ್ಷಗಳ ದೀರ್ಘಕಾಲ ಅವರು ನಡೆಸಿದ ಅಖಂಡ ಕಲಾಸೇವೆಗೆ ದೊರೆತ ಪ್ರತಿಫಲ ಕೇಂದ್ರ ಸಂಗೀತ ನಾಟಕ ಅಕಾಡೆಮಿಯವರು ಅವರಿಗೆ ನೀಡಿದ ಪ್ರಶಸ್ತಿ; ಕನ್ನಡಿಗರ ಅಲಕ್ಷ್ಯದಿಂದ ಕೊನೆಯ ಗಳಿಗೆಯಲ್ಲಿ ಅವರಿಗೆ ದೊರೆತುದು ದಾರುಣ ದಾರಿದ್ರ್ಯ. ಐವತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದವನಿಗೆ ದೊರೆತ ಪುರಸ್ಕಾರ ಇದು! ಇವುಗಳಿಂದ ಶ್ರೀ ನಾಯ್ಡು ತೃಪ್ತರಾಗಲೂ ಇಲ್ಲ, ಧೃತಿಗೆಡಲೂ ಇಲ್ಲ. ಅವರ ಕಲಾರಾಧನೆಗೆ ಯಾವುದೂ ಅಡ್ಡ ಬರಲಿಲ್ಲ. ಅವರನ್ನು ಅವರ ಧರ್ಮಪತ್ನಿ ಶ್ರೀಮತಿ ಮುನಿವೆಂಕಟಮ್ಮ ಹಿಂಬಾಲಿಸಿದ್ದು ಅಪೂರ್ವ ಯೋಗವೇ. ಶ್ರೀ ನಾಯ್ಡು ಅವರು ಇನ್ನಿಲ್ಲ. ಆದರೆ ಅವರ ಕಲಾಭಿಮಾನದ ಸಂಕೇತ 'ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿ' ಇಂದು ಇದೆ. ಅದು ಮುಂದೆಯೂ ಉಳಿಯುವಂತೆ ಕನ್ನಡಿಗರು ಪ್ರೋತ್ಸಾಹಿಸಬೇಕು. ಕಲಾ ಜೀವನದಲ್ಲಿ ಅವರ ನೆರಳಾಗಿ ಹಿಂಬಾಲಿಸಿ, ಅವರ ಕಲಾಸಿದ್ಧಿಗೆ ತನ್ನ ತ್ಯಾಗಧೂಪವನ್ನು ಉರಿಸಿದ ಶ್ರೀಮತಿ ಲಕ್ಷ್ಮೀಬಾಯಿ ಅವರು ಶ್ರೀ ನಾಯ್ಡು ಅವರು ಅರ್ಧಕ್ಕೆ ನಿಲ್ಲಿಸಿಹೋದ ಕಾರ್ಯವನ್ನು ಪೂರ್ಣ ಮಾಡಲೆಂದೂ ಮತ್ತು ಕನ್ನಡ ಜನತೆ ಮತ್ತು ಸರ್ಕಾರವು ಅವರಿಗೆ ಸಹಾಯ ನೀಡಲೆಂದೂ ನಾವು ಹಾರೈಸುತ್ತೇವೆ. ಶ್ರೀ ಸುಬ್ಬಯ್ಯನಾಯ್ಡು ಮತ್ತು ಅವರ ಧರ್ಮಪತ್ನಿಯವರಿಗೆ ನಾವು ಬಾಷ್ಪಾಂಜಲಿಗಳನ್ನರ್ಪಿಸಿ ಅವರ ಆತ್ಮಗಳಿಗೆ ಶಾಂತಿಯನ್ನು ಕೋರುತ್ತೇವೆ.

### ದಿ|| ಶ್ರೀ ಅಪ್ಪಾಜಿಗೌಡರು

ಮೈಸೂರಿನ ನಿಷ್ಣಾತ ಆಡಳಿತಗಾರ, ಪ್ರಾಮಾಣಿಕ ವ್ಯಕ್ತಿ, ಪರಿಶುದ್ಧ ಜೀವಿ, ಎನಿಸಿದ್ದ ಶ್ರೀ ಅಪ್ಪಾಜಿಗೌಡರು ಕಣ್ಮರೆಯಾದರು. ಅವರು ಸಾಹಿತ್ಯ ಪರಿಷತ್ತಿನ ಸದಸ್ಯರೂ ಆಗಿದ್ದರು. ಸರ್ಕಾರಿ ಸೇವೆಯಲ್ಲಿ ಕೆಲವು ಮಹತ್ವದ ಸ್ಥಾನಗಳನ್ನಲಂಕರಿಸಿ, ಕೊನೆಗೆ ಮಂತ್ರಿಗಳಾಗಿ ಅವರು ನಾಡಿಗೆ ಸಲ್ಲಿಸಿದ ಸೇವೆ ಪ್ರಶಂಸನೀಯ. ಅಂಥ ನ್ಯಾಯ ನಿಷ್ಠುರರು, ಧರ್ಮಭೀರುಗಳು, ಕರ್ತವ್ಯದಕ್ಷರೂ ಆದ ಅಧಿಕಾರಿಗಳು ಮತ್ತು ಮಂತ್ರಿಗಳು ಹೆಚ್ಚು ಜನರಿಲ್ಲ.

ಅವರಿಗೆ 'ನುಡಿ' ತನ್ನ ಬಾಷ್ಪಾಂಜಲಿಗಳನ್ನು ಸಲ್ಲಿಸಿ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತದೆ.

ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್ ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮

Licensed to Post without
pre-payment. Licence No. 1

Reg. No. B.G. 4 — August 1962

# ಸಾದರ ಸ್ವೀಕಾರ

ಸುವರ್ಣಗಿರಿ ಶ್ರೀ ಸಿದ್ಧೇಶ್ವರ ಸ್ವಾಮಿ ನಾಮಾವಳಿ : ಸೈಜು ೧/೧೬ ಫುಲ್‌ಸ್ಕೇಪ್, ಪುಟಗಳು ೨೨, ಬೆಲೆ ೨೫ ನ.ಪೈ.

* ಶ್ರೀ ಚರಲಿಂಗ ಸ್ವಾಮಿಗಳವರ ನಾಮಾವಳಿಯು : ಲೇಖಕರು: ಶ್ರೀ ಮ. ದು. ಮಿರ್ಜಿ; ಪುಟಗಳು ೧೦, ಸೈಜು ೧/೮ ಡೆಮ್ಮಿ.

* ಕರ್ನಾಟಕ ಸಂಗೀತ ತರಂಗಿಣಿ : (ಭಾಗ ೨); ಲೇಖಕರು : ಶ್ರೀ ಎಂ. ಆರ್. ಶಂಕರಮೂರ್ತಿ; ಸೈಜು ೧/೪ ಕ್ರೌನ್, ಪುಟಗಳು ೪೦, ಬೆಲೆ ೧ ರೂ. ೫೦ ನ.ಪೈ.

ಧರ್ಮಶ್ರೀ : ಲೇಖಕರು: ಶ್ರೀ ಎಸ್. ಎಲ್. ಬೈರಪ್ಪ; ಪ್ರಕಾಶಕರು: ಸಾಹಿತ್ಯ ಭಂಡಾರ, ಹುಬ್ಬಳ್ಳಿ; ಸೈಜು ೧/೮ ಕ್ರೌನ್, ಪುಟಗಳು ೩೪೦, ಬೆಲೆ ೪ ರೂ. ೨೫ ನ.ಪೈ.

Souvenir published on the occasion of Silver Jubilee Celebrations of Sri Sastry's Institute of Commerce, Bangalore—8-6-1962.

ಶಿವಸಂಕಲ್ಪ: ಲೇಖಕರು: ಶ್ರೀ ಚಿ. ಸದಾಶಿವಯ್ಯ; ಪ್ರಕಾಶಕರು: ಶ್ರೀ ಸಿರಿಯಾಳದೇವ ಭಕ್ತಮಂಡಲಿ, ವಿಜಯಪುರ, ಬೆಂಗಳೂರು ಜಿಲ್ಲೆ; ಸೈಜು ೧/೮ ಕ್ರೌನ್, ಪುಟಗಳು ೭೬, ಬೆಲೆ ೧ ರೂ.

ಆದಿಪುರಾಣಂ : ಲೇಖಕರು: ಪಂಪ ಮಹಾಕವಿ; ಪ್ರಕಾಶಕರು: ಪ್ರೊ॥ ಕೆ. ಜಿ. ಕುಂದಣಗಾರರು ಮತ್ತು ದಿವಾನ ಬಹದ್ದೂರ ಶ್ರೀ ಎ. ಪಿ. ಚೌಗುಲೆ; ಸೈಜು ೧/೮ ಡೆಮ್ಮಿ, ಪುಟಗಳು ೪೨೧ + ೧೫೮, ಬೆಲೆ ೧೧ ರೂ.

ದೇವರು : ಲೇಖಕರು: ಶ್ರೀ ಸ್ವಾಮಿ ಲಿಂಗಾನಂದರು; ಪ್ರಕಾಶಕರು: ಸುಯಿಧಾನ ಸುಗ್ರಂಥಮಾಲೆ; ಸೈಜು ೧/೮ ಫುಲ್‌ಸ್ಕೇಪ್, ಪುಟಗಳು ೬೨, ಬೆಲೆ ೬೦ ನ.ಪೈ.

ಲಿಂಗಪೂಜಾ ವಿಧಾನ : ಲೇಖಕರು: ಶ್ರೀ ಸ್ವಾಮಿ ಲಿಂಗಾನಂದರು; ಪ್ರಕಾಶಕರು: ಸುಯಿಧಾನ ಸುಗ್ರಂಥಮಾಲೆ; ಸೈಜು ೧/೮ ಫುಲ್‌ಸ್ಕೇಪ್, ಪುಟಗಳು ೫೭, ಬೆಲೆ ೪೦ ನ.ಪೈ.

**The Basaveshwar College Annual: Bagalkot**, 1961-62; By General Editor.

ಸವಿನೆನಪಿನ ವಿಶೇಷ ಸಂಚಿಕೆ, ಬೆಳ್ಳಿಯ ಹಬ್ಬ - ೧೯೬೨, ಕರ್ನಾಟಕ ಸಂಘ, ರಾಯಚೂರು; ಪುಟಗಳು ೧೫೦, ಬೆಲೆ ೨ ರೂ. ೫೦ ನ.ಪೈ.

ಆಂಧ್ರಸಾಹಿತ್ಯ ಪರಿಷತ್ಪತ್ರಿಕೆ: (Journal of the Telugu Academy, Kakinada) ಸಂಪುಟ ೫೦, ಭಾಗ v + vi, ಪ್ಲವ, ಮಾರ್ಗಶಿರ, ಫಾಲ್ಗುಣ ಸಂಚಿಕೆಗಳು ೧೯೬೧-೬೨.

* ಪುಷ್ಪ ವಿಕ್ಷೇಪ: (ಕವನಸಂಗ್ರಹ); ಲೇಖಕರು: ಶ್ರೀ ರಾ. ಸು. ಮಣಿ; ಪ್ರಕಾಶಕರು: ಮಣಿ ಪ್ರಕಾಶನ, ರಾಯನಕೆರೆ, ಮೈಸೂರು; ಸೈಜು ೧/೮ ಕ್ರೌನ್, ಪುಟಗಳು ೭೦, ಬೆಲೆ ೧ ರೂ. ೫೦ ನ.ಪೈ.

ಉಭಯ ಭಾರತಿ : (ಐತಿಹಾಸಿಕ ನಾಟಕ); ಲೇಖಕರು: ಶ್ರೀ ಸಿ. ಕೆ. ವೆಂಕಟರಾಮಯ್ಯ; ಸೈಜು ೧/೮ ಕ್ರೌನ್, ಪುಟಗಳು ೧೬೪, ಬೆಲೆ ೨ ರೂ.

ಜಾನಪದ ಕಥನ ಗೀತೆಗಳು: ಸಂಪಾದಕರು: ಕ.ರಾ.ಕೃ.; ಪ್ರಕಾಶಕರು: ಜಾನಪದ ಸಾಹಿತ್ಯ ಅಕಾಡೆಮಿ, ಮೈಸೂರು; ಸೈಜು ೧/೮ ಕ್ರೌನ್, ಪುಟಗಳು ೩೭೫, ಬೆಲೆ ೭ ರೂ. ೭೫ ನ.ಪೈ.

* ರೇಡಿಯೋ ವಿಜ್ಞಾನ: ಲೇಖಕರು: ಶ್ರೀ ಕುಡ್ವಿನಾಗೇಶ ತಂತ್ರಿ; ಸೈಜು ೧/೮ ಕ್ರೌನ್, ಪುಟಗಳು ೨೪೦, ಬೆಲೆ ೪ ರೂ.

ಭಾರತದಲ್ಲಿ ಶಿಕ್ಷಣದ ಪುನರ್ನಿರ್ಮಾಣ: ಲೇಖಕರು: ಶ್ರೀ ಜಾಕೀರ ಹುಸೇನ; ಅನುವಾದಕರು: ಶ್ರೀ ಮತ್ತೂರ ಕೃಷ್ಣಮೂರ್ತಿ; ಪ್ರಕಾಶಕರು: ನ್ಯಾಷನಲ್ ಬುಕ್‌ಟ್ರಸ್ಟ್, ಡೆಲ್ಲಿ; ಸೈಜು ೧/೮ ಡೆಮ್ಮಿ, ಪುಟಗಳು ೭೧, ಬೆಲೆ ೭೫ ನ.ಪೈ.

ಸಂಗೀತ ಶಾಸ್ತ್ರಸಾರ: ಲೇಖಕರು: ಗಾನವಿದ್ಯಾ ವಿಶಾರದ ವೈಣಿಕ ವಿದ್ವಾನ್ ಮೈಸೂರು ಶ್ರೀ ಎಲ್. ರಾಜಾರಾವ್; ಸೈಜು ೧/೮ ಕ್ರೌನ್, ಪುಟಗಳು ೧೧೨ + ೨, ಬೆಲೆ ೨ ರೂ.

* ಹುಚ್ಚೋ ಹುಚ್ಚು: (ಒಂದು ಪ್ರಹಸನ); ಲೇಖಕರು: ಶ್ರೀ ಬಿ. ಎ. ಅರಸುಕುಮಾರ್; ಪ್ರಕಾಶಕರು: ಕರ್ನಾಟಕ ಆರ್ಟ್ಸ ಥಿಯೇಟರ್ಸ್, ಬೆಂಗಳೂರು-೧೮; ಸೈಜು ೧/೮ ಕ್ರೌನ್, ಪುಟಗಳು ೩೧, ಬೆಲೆ ೬೦ ನ.ಪೈ.

* ಧೃತರಾಷ್ಟ್ರ ಸಂತಾನ: ಲೇಖಕರು: ಪ್ರೊ॥ ಜಿ. ವಿ. ಕುಲಕರ್ಣಿ; ಪ್ರಕಾಶಕರು: ಮಿತ್ರಗೋತ್ರಿ ಕನ್ಸರ್ನ್ಸ, ಮಲಿಕ ಬಿಲ್ಡಿಂಗ್, ಶಿವಾಜಿ ಪಾರ್ಕ ರಸ್ತೆ, ೨, ಮುಂಬಯಿ-೨೮; ಸೈಜು ೧/೮ ಕ್ರೌನ್, ಪುಟಗಳು ೧೦೪, ಬೆಲೆ ೧ ರೂ. ೫೦ ನ.ಪೈ.

* ದ್ವಾದಶ ಜ್ಯೋತಿರ್ಲಿಂಗ ಮಹಿಮಾ : ಲೇಖಕರು: ಶ್ರೀ ತಲಕಾಡು ಅಗಮಿಕ ಕೃಷ್ಣ ದೀಕ್ಷಿತರು; ಪ್ರಕಾಶಕರು: ಧರ್ಮ ಸಂದೇಶ ಪೋಷಿಣೀ ಸಭಾ, ಬೆಂಗಳೂರು; ಸೈಜು ೧/೮ ಕ್ರೌನ್, ಪುಟಗಳು ೧೩೧, ಬೆಲೆ ೨ ರೂ.

ಬಾಳಿನ ಬುತ್ತಿ : ಲೇಖಕರು: ಶ್ರೀ ಎಂ. ವಿ. ಸೀತಾರಾಮಯ್ಯ; ಪ್ರಕಾಶಕರು: ಸಾಹಿತ್ಯ ಮಂದಿರ, ಬೆಂಗಳೂರು; ಸೈಜು ೧/೮ ಕ್ರೌನ್, ಪುಟಗಳು ೧೩೦, ಬೆಲೆ ೧ ರೂ. ೫೦ ನ.ಪೈ.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

Reg. No. B. G. 4—August 1962

Licensed to Post without pre-payment. License No 1

# ಭಾರತದಲ್ಲೆಲ್ಲಾ ಪ್ರಸಿದ್ಧಿ ಹೊಂದಿರುವ

## ಮೈಸೂರಿನ ಜನದ ಪ್ರೀತಿಗೆ ಪಾತ್ರವಾದ




**ಕಾಡೆಮ್ಮೆ ಗುರುತಿನ**



**ವಿದ್ಯಾರ್ಥಿಗಳಿಗೆ, ಲೇಖಕರಿಗೆ, ಪ್ರಕಾಶಕರಿಗೆ, ಮಹಾಜನರಿಗೆ**

**ಎಲ್ಲ ರೀತಿಯ ವ್ಯವಹಾರದಲ್ಲಿ**

**ಬೇಕಾಗುವ**

# ಮೈಸೂರು ಕಾಗದ

## ಮೈಸೂರು ಕಾಗದ ಕಾರ್ಖಾನೆ, ಲಿಮಿಟೆಡ್

**ಭದ್ರಾವತಿ.** **ಬೆಂಗಳೂರು.**

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ. ಚಾಮರಾಜಪೇಟೆ, ಬೆಂಗಳೂರು–೧೮.